ಉತ್ತುಂಗ ಕುಶಲಶಿಲ್ಪಿ

# ದೇವಲಕುಂದ ವಾದಿರಾಜ್

ಕನಕಾಮೂರ್ತಿ



ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಮೊದಲನೇ ಮಹಡಿ, ರವೀಂದ್ರ ಕಲಾಕ್ಷೇತ್ರ
ಜೆ.ಸಿ. ರಸ್ತೆ, ಬೆಂಗಳೂರು - 560 002





ಕನಕಾಮೂರ್ತಿ

ಪುರುಷಪ್ರಧಾನವಾದ ಶಿಲ್ಪಕಲಾಕ್ಷೇತ್ರದಲ್ಲಿ ಸತತ ಸಾಧನೆ, ಪ್ರತಿಭೆಯಿಂದ ದೇಶವಿದೇಶಗಳಲ್ಲಿ ಕೀರ್ತಿ ಪಡೆದವರು ಶ್ರೀಮತಿ ಕನಕಾಮೂರ್ತಿ ಅವರು.

ಪ್ರಸಿದ್ಧ ಕಲೆಯ ಬೀಡಾದ ಸೋಮನಾಥಪುರದ ಬಳಿಯ ಟಿ. ನರಸೀಪುರದಲ್ಲಿ 1942ರಲ್ಲಿ ಜನಿಸಿದ ಶ್ರೀಮತಿ ಕನಕಾಮೂರ್ತಿಯವರು ವಿಜ್ಞಾನ ಪದವೀಧರೆಯಾಗಿ ಹಾಗೂ ಕ್ಲೇ ಮಾಡೆಲಿಂಗ್‌ನಲ್ಲಿ ಡಿಪ್ಲೊಮಾ ಪಡೆದು ಕಲೆಗೆ ತಮ್ಮನ್ನು ಅರ್ಪಿಸಿಕೊಂಡವರು. ಪ್ರಾರಂಭದಲ್ಲಿ ಬೆಂಗಳೂರಿನ ಕಲಾಮಂದಿರದಲ್ಲಿ ಚಿತ್ರಕಲೆಯನ್ನು ಅಭ್ಯಾಸ ಮಾಡಿ ಅನಂತರ ವಿಖ್ಯಾತ ಶಿಲ್ಪಿ ಡಿ. ವಾದಿರಾಜ ಅವರಿಂದ ಶಿಲ್ಪಕಲೆಯನ್ನು ಕಲಿತರು. ಹೊಯ್ಸಳ ಶೈಲಿಯ ನಾಲ್ಕೂವರೆ ಅಡಿಯ ಬಳಪದಕಲ್ಲಿನ ವಿಷ್ಣು ಪ್ರತಿಮೆ, ಕೆಂಪು ಮರಳುಗಲ್ಲಿನ ಚಾಲುಕ್ಯ ಶೈಲಿಯ ಗಜಾಸುರಮರ್ದನ, ಚಾಲುಕ್ಯ ಶೈಲಿಯ ಮೂರು ಅಡಿ ಗಣೇಶ, ರಾಷ್ಟ್ರಕವಿ ಕುವೆಂಪು ಅವರ ಕಂಚಿನ ಅವಕ್ಷ ಶಿಲ್ಪ ಇವು ಅವರ ಕೆಲವು ರಚನೆಗಳು. ಫೈಬರ್‌ಗ್ಲಾಸ್ ಮಾಧ್ಯಮದಲ್ಲಿ ಅನೇಕ ವ್ಯಕ್ತಿ ಶಿಲ್ಪಗಳನ್ನು ರಚಿಸಿದ್ದಾರೆ. ಲಂಡನ್‌ನಲ್ಲಿ ನಡೆದ ಆರ್ಟ್ ಇನ್ ಆಕ್ಷನ್ ವಸ್ತು ಪ್ರದರ್ಶನ ಮತ್ತು ಪ್ರಾತ್ಯಕ್ಷಿಕೆಯಲ್ಲಿ ಭಾಗವಹಿಸಿದ ಹಿರಿಮೆ ಇವರದು. ಅವರ ಪ್ರತಿಭೆಯನ್ನು ಮೆಚ್ಚಿದ ಲಂಡನ್‌ನ ಕಲಾಸಂಸ್ಥೆ ಪುನಃ ಅವರನ್ನು ಕರೆಸಿಕೊಂಡುದು ಅವರ ಸಾಧನೆಯ ದ್ಯೋತಕವಾಗಿದೆ.

ಶ್ರೀಮತಿ ಕನಕಾಮೂರ್ತಿಯವರು ಅನೇಕ ಶಿಲ್ಪಕಲಾ ಕಮ್ಮಟಗಳನ್ನು ಸಂಘಟಿಸಿ, ನಿರ್ದೇಶಕರಾಗಿ ಮಾರ್ಗದರ್ಶನ ನೀಡಿದ್ದಾರೆ. ದೇಶಾದ್ಯಂತ ಅನೇಕ ಸಾಂಪ್ರದಾಯಿಕ ಶಿಲ್ಪ, ಭಾವಶಿಲ್ಪ ಶಿಬಿರಗಳಲ್ಲಿ ಭಾಗವಹಿಸಿದ್ದಾರೆ. ರಾಜ್ಯ ಲಲಿತಕಲಾ ಅಕಾಡೆಮಿ, ಬೆಂಗಳೂರು ರೋಟರಿ ಕ್ಲಬ್ ಮತ್ತು ಇತರ ಕಲಾಸಂಸ್ಥೆಗಳ ಪ್ರಶಸ್ತಿ ಗೌರವಗಳಿಗೆ ಹಾಗೂ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗೆ ಪಾತ್ರರಾಗಿರುವ ಇವರು ಪ್ರಸಕ್ತ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಸದಸ್ಯರಾಗಿದ್ದಾರೆ.

ಶಿಲಾಶಿಲ್ಪ ಕಂಚಿನ ಶಿಲ್ಪದ ಕಾರ್ಯವನ್ನು ಸವಾಲೆಂದು ಸ್ವೀಕರಿಸಿ ಎಲ್ಲರನ್ನೂ ಬೆರಗುಗೊಳಿಸಿರುವ ಅಪೂರ್ವ ಪ್ರತಿಭೆಯ ಶಿಲ್ಪಿ ಶ್ರೀಮತಿ ಕನಕಾಮೂರ್ತಿ ಅವರು. ಇವರು ತಮ್ಮ ಗುರುಗಳ ಬಗ್ಗೆ ವಿವರವಾಗಿ ಈ ಪುಸ್ತಕದಲ್ಲಿ ಬರೆದಿದ್ದಾರೆ.

ಶಿಲ್ಪಕಲಾವಿದರ ಮಾಲೆ-2

ಉತ್ತುಂಗ ಕುಶಲಶಿಲ್ಪಿ

# ದೇವಲಕುಂದ ವಾದಿರಾಜ್

ಕನಕಾಮೂರ್ತಿ




ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಮೊದಲನೇ ಮಹಡಿ, ರವೀಂದ್ರ ಕಲಾಕ್ಷೇತ್ರ
ಜೆ.ಸಿ. ರಸ್ತೆ, ಬೆಂಗಳೂರು - 560 002

UTUNGA KUSALASHILPI DEVALAKUNDA VADIRAJ :
A Monograph By : Kanakamurthy.
Published by : N. Marishamachar,
Registrar, Karnataka Shilpakala Academy,
I Floor, Ravindrakalakshetra, J.C. Road,
Bangalore-560 002

ಮೊದಲ ಮುದ್ರಣ : 1998

ಪ್ರತಿಗಳು : 1000

ಸಂಪಾದಕ :
ಎನ್. ಮರಿಶಾಮಾಚಾರ್

ಬೆಲೆ : ರೂ. 15-00

ಮುಖಪುಟ ಚಿತ್ರ : ಎಂ. ಶ್ರೀಧರಮೂರ್ತಿ

ಮುದ್ರಕರು :

ರಶ್ಮಿ ಮುದ್ರಣ
ಬೆಂಗಳೂರು - 560 027
ಫೋ : 2243550

# ಮೊದಲ ಮಾತು

ನಮ್ಮ ರಾಜ್ಯ ಶಿಲ್ಪಕಲೆಗೆ ವಿಶ್ವದಲ್ಲೇ ಹೆಸರು ಪಡೆದಿದ್ದು. 'ಶಿಲ್ಪಕಲೆಯ ತವರೂರು' ಎಂದು ಕರೆಯಲ್ಪಟ್ಟಿದೆ. ಈ ನಾಡಿನಲ್ಲಿ ಅನೇಕ ಶಿಲ್ಪಶೈಲಿಗಳು ಹುಟ್ಟಿ, ಅವು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿವೆ. ನಮ್ಮ ರಾಜ್ಯದಲ್ಲಿ ಶಿಲ್ಪಕಲೆಗಾಗಿ ದುಡಿದವರು ಹಲವಾರು ಶಿಲ್ಪಿಗಳು. ಕೆಲವು ಶಿಲ್ಪಿಗಳು 'ಶಿಲ್ಪ ರಚಿಸುವುದೇ ತಮ್ಮ ಕಾಯಕ'ವೆಂದು ತಿಳಿದು, ಶಿಲ್ಪದ ಮೇಲೆ ತಮ್ಮ ಹೆಸರುಗಳನ್ನು ನಮೂದಿಸಿರುವುದಿಲ್ಲ. ಸಾಂಪ್ರದಾಯಿಕವಾಗಿ ಶಿಲ್ಪಕಲೆ ಬೆಳೆದು ಬಂದಿದ್ದು ಇಂದಿಗೂ ಈ ಕಲೆಗಳನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವವರು ನಮ್ಮಲ್ಲಿದ್ದಾರೆ. ಅಕಾಡೆಮಿ ಇಂತಹ ಹಿರಿಯ ಶಿಲ್ಪಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವ ಯೋಜನೆಯನ್ನು ಪ್ರಾರಂಭಿಸಿದೆ. ಈ ಪುಸ್ತಕಗಳು ಈ ಶಿಲ್ಪಿಗಳ ಮತ್ತು ಕೃತಿಗಳ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಶಿಲ್ಪಕಲೆ ಬೆಳೆದು ಬಂದ ದಾರಿ ಮತ್ತು ಅದರ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುವುದು.

ಈ ಯೋಜನೆಯಲ್ಲಿ ನಮ್ಮ ನಾಡಿನ ಹೆಸರಾಂತ ಶಿಲ್ಪಿಗಳಾದ ದಿ: ಶ್ರೀ ಡಿ. ವಾದಿರಾಜ ಅವರ ಬಗ್ಗೆ ಶ್ರೀಮತಿ ಕನಕಾಮೂರ್ತಿ ಅವರು ಪುಸ್ತಕವನ್ನು ಬರೆದುಕೊಟ್ಟಿದ್ದಾರೆ. ಶ್ರೀಯುತರು ಶಿಲ್ಪಿಯ ಬಗ್ಗೆ ಚೆನ್ನಾಗಿ ಅರಿತಿದ್ದು, ಅವರ ಜೀವನ ಮತ್ತು ಕೃತಿಗಳ ಬಗ್ಗೆ ವಿವರವಾಗಿ ಬರೆದಿದ್ದಾರೆ. ಶ್ರೀಯುತರಿಗೆ ಅಕಾಡೆಮಿಯ ಪರವಾಗಿ ವಂದನೆಗಳನ್ನು ಸಲ್ಲಿಸುವೆ. ನಮ್ಮ ನಾಡಿನ ಜನರು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

1998
ಬೆಂಗಳೂರು

**ಕೆ. ಶಾಮರಾಯ ಆಚಾರ್ಯ**
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಲೇಖಕರ ಮಾತು

ನಿರಂತರ ಅಧ್ಯಯನಶೀಲರಾಗಿದ್ದ ಶಿಲ್ಪಿ ಶ್ರೀ ವಾದಿರಾಜರಲ್ಲಿ ಕಲಿಯುವ ಸೌಭಾಗ್ಯ ದೊರೆತದ್ದು ನನ್ನ ಪುಣ್ಯ. 'ಗುರು' ಎಂದರೆ ಶಿಷ್ಯರ ಮನಸ್ಸಿನಲ್ಲಿ ಮೂಡುವ ಸಂಶಯಗಳಿಗೆಲ್ಲಾ ಪರಿಹಾರದ ದಾರಿ ತೋರುವವರಲ್ಲವೆ ? ಬದುಕಿನಲ್ಲಿ ನಂಬಿಕೆ ಶ್ರದ್ಧೆಗಳೇ ಜೀವಾಳವೆಂದು ನಂಬಿ, ಗುರು-ಶಿಷ್ಯ ಪರಂಪರೆಯ ಹಾದಿಯಲ್ಲಿ ಹಲವಾರು ಶಿಷ್ಯರನ್ನು ರೂಪಿಸಿದ ಹೆಗ್ಗಳಿಕೆ ಶ್ರೀ ವಾದಿರಾಜರದು. ವ್ಯಕ್ತಿ ಕಣ್ಮರೆಯಾದರೂ, ಇಂತಹ ಮೌಲ್ಯಗಳ ಮೂಲಕ, ಶಿಷ್ಯ ಸಮೂಹದ ಮೂಲಕ 'ಜೀವಂತ'ವಾಗಿದ್ದು, ಒಂದು ಪರಂಪರೆಯನ್ನೇ ಶಿಲ್ಪ ಜಗತ್ತಿಗೆ ಅರ್ಪಿಸಿರುವುದು ವಾದಿರಾಜರುಗಳಿಸಿರುವ ಅಪೂರ್ವನಿಧಿ. ಅವರ ಬದುಕೇ ಒಂದು ಸಾಹಸದ ಕಥೆ, ಸ್ಫೂರ್ತಿ ನೀಡುವಂತಹುದು. ಬರೀ ಗುರುಸ್ಥಾನದಲ್ಲಿಯೇ ನಿಲ್ಲದೆ, ತಮ್ಮ ಸಹೃದಯದಿಂದ, ಸರಳತೆಯಿಂದ, ಬಿಚ್ಚು ಮನಸ್ಸಿನಿಂದ ಶಿಷ್ಯರಿಗೆಲ್ಲರಿಗೂ ಬಂಧುವಾಗಿ, ಆಪ್ತಮಿತ್ರರಾಗಿ ಬದುಕಿದವರು. ಸಹಜವಾಗಿ ಕಲಾವಿದರ ಜೀವನ ಹೋರಾಟಮಯ ವಾಗಿರುತ್ತದೆ, ವಾದಿರಾಜರೂ ಇದಕ್ಕೆ ಹೊರತಾಗಿರಲಿಲ್ಲ. ಹೋರಾಟಮಯವಾದರೂ, ಸ್ಫೂರ್ತಿದಾಯಕವಾಗಿದ್ದ ಅವರ ಬದುಕು, ಶಿಲ್ಪಕಲೆಯಂತಹ ಅಪೂರ್ವಕಲೆಯನ್ನು ಅಭ್ಯಾಸ ಮಾಡುವವರಿಗೆ ಪ್ರೋತ್ಸಾಹದಾಯಕವಾಗಿರುವುದಲ್ಲದೆ, ಇದೇ ಕಲೆಗೇ ಒಂದು ಮರು ಹುಟ್ಟು ಕೊಟ್ಟು, ಹೊಸ ಹೊಸ ಅನ್ವೇಷಣೆಗಳಿಗೆ ಎಡೆಮಾಡಿ ಕೊಟ್ಟಿದೆ. ಅವರ ಈ ವಿಶಿಷ್ಟ ಪ್ರಯೋಗಶೀಲತೆಯೇ ನನ್ನ ಬರವಣಿಗೆಗೆ ಸ್ಫೂರ್ತಿ. ಬಹಳ ವರ್ಷಗಳು ಅವರ ನೆರೆ ಮನೆಯಲ್ಲಿಯೇ ಇದ್ದು, ಅವರು ಬದುಕಿರುವವರೆಗೂ ಬಹಳ ಹತ್ತಿರದಿಂದ ನೋಡುವ ಅವಕಾಶ ದೊರೆತಿದ್ದೂ, ಮೂವತ್ತು ವರ್ಷಗಳ ಕಾಲ, ಅವರು ಮಾಡುತ್ತಿದ್ದ ಕಲಾ ಚಟುವಟಿಕೆಗಳಲ್ಲಿ ಭಾಗಿಯಾಗುತ್ತಿದ್ದುದ್ದೂ, ನನಗೆ ಸಿಕ್ಕ ಸದವಕಾಶ ಹಾಗೂ ಸುಯೋಗ ಸದಾ ಚೈತನ್ಯದ ಚಿಲುಮೆಯಾಗಿ,

ಪ್ರಯೋಗಶಾಲರಾಗಿದ್ದ ಅವರ ಬದುಕಿನ ಕ್ರಮ, ಮಾಡುತ್ತಿದ್ದ ಕೆಲಸಗಳಲ್ಲಿನ ವಿಶೇಷತೆ ನನ್ನನ್ನು ದಿಗ್ಭ್ರಮೆ ಗೊಳಿಸುತ್ತಿತ್ತು. ಯೋಜನೆಗಳಲ್ಲಿ, ಕ್ರಿಯೆಯಲ್ಲಿ ಬಹಳ ವೇಗವಾಗಿ ಮುಂದುವರೆಯುತ್ತಿದ್ದ ಅವರಿಗೆ ಕಾಲದ, ಹಣದ ಯಾವ ಅಡಚಣೆಗಳೂ ತಡೆಯಾಗುತ್ತಿರಲಿಲ್ಲ. ಇವೆಲ್ಲವೂ ನನ್ನ ಬರವಣಿಗೆಗೆ ಮೂಲ. ಈ ನನ್ನ ಸಂಗ್ರಹವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವುದಾಗಿ ಶಿಲ್ಪಕಲಾ ಅಕಾಡೆಮಿಯ ರಿಜಿಸ್ಟ್ರಾರರೂ, ಸ್ವತಃ ಕಲಾವಿದರೂ, ಬರಹಗಾರರೂ ಆದ ಶ್ರೀಮರಿಶಾಮಾಚಾರ್‌ರು ಹೇಳಿದಾಗ ನನಗಾದ ಸಂತೋಷ ಅಷ್ಟಿಷ್ಟಲ್ಲ. ಈ ನನ್ನ ಪ್ರಯತ್ನಕ್ಕೆ ಒಂದು ರೂಪ ದೊರೆತದ್ದು ನನ್ನ ಅದೃಷ್ಟ, ಇದು ನನ್ನ ಗುರುಗಳಿಗೆ ಸಲ್ಲಿಸಬಹುದಾದ ಒಂದು ಕಿರುಕಾಣಿಕೆ, ಇದಕ್ಕೆಲ್ಲ ಅವಕಾಶ ಮಾಡಿಕೊಟ್ಟ ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷರೂ, ಶಿಲ್ಪಿಗಳೂ, ವಾದಿರಾಜರ ಆತ್ಮೀಯ ಸ್ನೇಹಿತರೂ ಆದ ಶ್ರೀ ಶ್ಯಾಮರಾಯಾಚಾರ್ಯರಿಗೂ, ಶ್ರೀ ಎನ್. ಮರಿಶಾಮಾಚಾರ್‌ರಿಗೂ ನಾನು ಚಿರಋಣಿ. ಕಿರಿಯ ಶಿಲ್ಪಿಗಳಿಗೆ ನನ್ನ ಈ ಬರವಣಿಗೆಯಿಂದ ಸ್ಫೂರ್ತಿ ದೊರೆಯುವುದಾದರೆ ನನ್ನ ಈ ಪ್ರಯತ್ನ ಸಾರ್ಥಕ.

–ಕನಕಾಮೂರ್ತಿ



# ಉತ್ತುಂಗ ಕುಶಲ ಶಿಲ್ಪಿ
# ದೇವಲಕುಂದ ವಾದಿರಾಜ್

“ಲೋಕ ವಿಖ್ಯಾತ ಚಾಲುಕ್ಯರ ಬಾದಾಮಿಯ ಗುಹಾಂತರ ದೇವಾಲಯಗಳ ಬಳಿ, ಭಾರತದಲ್ಲೇ ಮೊದಲಬಾರಿಗೆ ಸಂಪ್ರದಾಯ ಶಿಲ್ಪಿಗಳ ಕಾರ್ಯಾಗಾರ, ಕನ್ನಡ ಸಂಸ್ಕೃತಿ ಇಲಾಖೆ ಮತ್ತು ದಕ್ಷಿಣ ಮಧ್ಯ ವಲಯ ಸಾಂಸ್ಕೃತಿಕ ಕೇಂದ್ರಗಳ ಆಶ್ರಯದಲ್ಲಿ, ದೇವಲಕುಂದ ವಾದಿರಾಜರು ಈ ಕಾರ್ಯಾಗಾರದ ನಿರ್ದೇಶಕರು” ಸುದ್ದಿ ವಾದಿರಾಜರಿಗೆ ತುಂಬಾ ಸಂತೋಷವನ್ನುಂಟು ಮಾಡಿತ್ತು. ಇದು ನಡೆದದ್ದು 1988ನೇ ಇಸವಿ ಫೆಬ್ರವರಿ ತಿಂಗಳಿನಲ್ಲಿ.

ಸಂಗೀತ, ಸಾಹಿತ್ಯ, ನೃತ್ಯ, ಚಿತ್ರಕಲೆ ಮುಂತಾದ ಕ್ಷೇತ್ರಗಳಲ್ಲಿ ಶಿಬಿರಗಳು, ಕಮ್ಮಟಗಳು, ಕಾರ್ಯಾಗಾರಗಳು ನಡೆದದ್ದುಂಟು. ಚಿತ್ರಕಲೆಯ ಶಿಬಿರಗಳಲ್ಲಿ, ಕರಕುಶಲಕಲೆಗಳ ಶಿಬಿರಗಳಲ್ಲಿ ಶಿಲ್ಪಿಗಳಿಗೂ ಅವಕಾಶ ದೊರೆತದ್ದುಂಟು. ಆದರೆ ಸಂಪ್ರದಾಯ ಶಿಲ್ಪಕ್ಕೆಂದೇ ಅದೂ ಬಾದಾಮಿಯಂತಹ ಶಿಲ್ಪ ಕ್ಷೇತ್ರದಲ್ಲಿ, ಕಾರ್ಯಾಗಾರ ನಡೆಸುತ್ತಿದ್ದುದು ಹೆಚ್ಚಿಗೆ ಸಂಭ್ರಮಪಡುವ ವಿಷಯವಾಗಿತ್ತು.

ಮೊದಲೇ ಯೋಜಿಸಿದಂತೆ ಹದಿನೈದು ದಿನಗಳ ಈ ಕಾರ್ಯಾಗಾರದಲ್ಲಿ, ದಕ್ಷಿಣ ಕೇಂದ್ರ ವಲಯಗಳಾದ ಕರ್ನಾಟಕ, ಆಂಧ್ರ, ತಮಿಳುನಾಡು, ಮಹಾರಾಷ್ಟ್ರ ಮತ್ತು ಮಧ್ಯಪ್ರದೇಶಗಳಿಂದ ಐದೈದು ಕಿರಿಯ ಶಿಲ್ಪಿಗಳನ್ನು ಭಾಗವಹಿಸಲು ಆರಿಸಲಾಗಿತ್ತು. ವಾದಿರಾಜರ ಸಹಾಯಕ್ಕಾಗಿ ಉಪನಿರ್ದೇಶಕರಾಗಿ ಅವರ ಶಿಷ್ಯರೇ ಆದ ಶ್ರೀಶ್ಯಾಮಚಾರ್, ಶ್ರೀಮೋಹನ್ ಮತ್ತು ನಾನೂ ಆಯ್ಕೆಯಾದೆವು. ಕರ್ನಾಟಕದ ಪರವಾಗಿ ಆರಿಸಿದ ಅಭ್ಯರ್ಥಿಗಳಲ್ಲಿ ವಾದಿರಾಜರ ಶಿಷ್ಯರಿಗೇ ಅವಕಾಶಕೊಡಲಾಗಿತ್ತು. ಇಂತಹ ಅಪರೂಪದ ಅವಕಾಶ, ಹದಿನೈದು ದಿನಗಳ ಕಾಲ ಬಾದಾಮಿಯಲ್ಲಿರುವುದು, ಅಲ್ಲಿಯೇ ಕೆಲಸ ಮಾಡುವುದು, ಬೇರೆ ಬೇರೆ ರಾಜ್ಯಗಳಿಂದ ಬರುವ ಶಿಲ್ಪಿಗಳ ಪರಿಚಯ ಮಾಡಿಕೊಳ್ಳುವುದು, ಒಂದೇ ಶೈಲಿಯ ದೇವಾಲಯಗಳ ಸಮೂಹವನ್ನು ನೋಡುತ್ತ, ಅಧ್ಯಯನ ಮಾಡುವುದು, ಎಲ್ಲವೂ ಒಂದಕ್ಕಿಂತ ಒಂದು ಆಕರ್ಷಕವಾಗಿತ್ತು. ನಮಗೆಲ್ಲ ಬಹಳ ಸಂತೋಷವನ್ನುಂಟು ಮಾಡಿತ್ತು.

ಹದಿನೈದು ದಿನಗಳು ಕಳೆದದ್ದೇ ತಿಳಿಯಲಿಲ್ಲ. ಅಲ್ಲಿಯ ಕೆಂಪು ಕಲ್ಲಿನಲ್ಲೇ ಶಿಲ್ಪಗಳನ್ನು ಕಡೆದಿದ್ದೆವು. ಸುಮಾರು 21 ಜನ ಶಿಲ್ಪಿಗಳ ಎಲ್ಲ ಕೃತಿಗಳನ್ನೂ ಕಡೆಯ ದಿನ ಪ್ರದರ್ಶನಕ್ಕಿಡಲಾಗಿತ್ತು. ಜೊತೆಗೆ ಸಮಾರೋಪ ಸಮಾರಂಭದ ಏರ್ಪಾಡೂ ನಡೆದಿತ್ತು. ನಿರ್ದೇಶಕರಾಗಿ ಭಾಷಣ ಮಾಡುವ ಹೊಣೆ ವಾದಿರಾಜರದಾಗಿತ್ತು. ಅತ್ಯಂತ ಉತ್ಸಾಹದಿಂದ "ಶಿಲ್ಪಿಗಳಿಗೆ ಇಂತಹ ಅವಕಾಶ ಸಿಕ್ಕಿದ್ದು ಹೊಸಲೋಕ ತೋರಿಸಿದಂತಾಗಿದೆ. ಮೊದಲೇ ಸಂಪ್ರದಾಯ ಶಿಲ್ಪಿಗಳು ತಮ್ಮ ಪಾಡಿಗೆ ತಾವು ಕೆಲಸ ಮಾಡಿಕೊಳ್ಳುವ ಪ್ರವೃತ್ತಿಯವರು. ಇದಕ್ಕೆ ಕಾರಣವೂ ಇದೆ. ಬೇರೆ ವಿದ್ಯೆಗಳಿಗಿರುವಂತೆ ಈ ಕ್ಷೇತ್ರಕ್ಕೆ ಎಲ್ಲರಿಗೂ ಮುಕ್ತ

ಪ್ರವೇಶವಿಲ್ಲದಿರುವುದೇ ಕಾರಣ. ಸಮಾಜದ ಕೆಲವೇ ಬೇಡಿಕೆಗಳಿಗಾಗಿ, ಈ ಶಿಲ್ಪ ವಿದ್ಯೆ ಇನ್ನೂ ಉಳಿದಿದೆ. ನಾಗರಕಲ್ಲು, ನವಗ್ರಹ, ಹೆಚ್ಚೆಂದರೆ ಗಣೇಶ, ಕಾಳಿ, ಶಿವಲಿಂಗ, ಹೀಗೆ ಕೆಲವೇ ಧಾರ್ಮಿಕ ಬೇಡಿಕೆಗಳಿಗಾಗಿ ಕೆಲಸ ಮಾಡುತ್ತಿರುವ ಶಿಲ್ಪಿಗೆ ಕಲೆಯ ಬಗ್ಗೆ ಯೋಚಿಸಲು ಅವಕಾಶವೆಲ್ಲಿದೆ ? ಇಂದಿನ ಶಿಬಿರದಲ್ಲಿ ಈ ಸುತ್ತಮುತ್ತಲಿನ ಹಳ್ಳಿಗಳಿಂದ ಶಿಲ್ಪಿಗಳು ಬಂದಿದ್ದಾರೆ. ಹೊಸ ಹಾದಿಯಲ್ಲಿ ನಡೆಯಲು ಆಸಕ್ತರಾಗಿದ್ದಾರೆ. ಸಂಪ್ರದಾಯ ಶಿಲ್ಪವನ್ನು ಉಳಿಸಿಕೊಂಡು ಬಂದಿರುವ ಇವರಿಗೆ ಅವಕಾಶ ಮಾಡಿಕೊಟ್ಟರೆ, ಈ ಕ್ಷೇತ್ರವನ್ನು ಬೆಳೆಸಲು ಸಮರ್ಥರಾಗುತ್ತಾರೆ. ಅದಕ್ಕಾಗಿ ಸಂಪ್ರದಾಯ ಶಿಲ್ಪಕ್ಕಾಗಿಯೇ ಒಂದು ಪ್ರತ್ಯೇಕ ಅಕಾಡೆಮಿ ಬೇಕು. ಸಂಪ್ರದಾಯ ಶಿಲ್ಪ ನಾಡಿನಲ್ಲಿ ಉಳಿಯಬೇಕಾದರೆ, ಬೆಳೆಯಬೇಕಾದರೆ, ಒಂದು ಅಕಾಡಮಿಯ ರಚನೆಯಾಗಬೇಕು. ಶಿಲ್ಪಿಗಳಿಗೆ ತಮ್ಮ ಅನಿಸಿಕೆಗಳನ್ನು ಧೈರ್ಯವಾಗಿ ಸರ್ಕಾರಕ್ಕಾಗಲೀ, ಸಾರ್ವಜನಿಕರಿಗಾಗಲೀ ತಿಳಿಸಲು ಒಂದು ವೇದಿಕೆ ಬೇಕೇ ಬೇಕು. ಆಗ ಶಿಲ್ಪಿಗಳು ಒಟ್ಟುಗೂಡಿ, ತಮ್ಮ ಕುಂದುಕೊರತೆಗಳ ಬಗ್ಗೆ ಚರ್ಚಿಸಿ, ಕಲೆಯ ಮುನ್ನಡೆಗಾಗಿ ದುಡಿಯಬಹುದು'' ಎಂದು ಹೇಳಿದರು. ಆ ಭಾಗದ ಪತ್ರಿಕೆಗಳಲ್ಲಿ ''ಶಿಲ್ಪ ಕಲೆಗಾಗಿ ಪ್ರತ್ಯೇಕ ಅಕಾಡೆಮಿ, ಖ್ಯಾತ ಶಿಲ್ಪಿ ವಾದಿರಾಜರ ಕರೆ'' ಎಂದು ಬರೆದು, ಶಿಲ್ಪಕಲೆಯ ಶಿಬಿರದ ಬಗ್ಗೆ ವಿವರಗಳು ಪ್ರಕಟವಾದವು. ತಮ್ಮ ಕನಸು, ಬಯಕೆಗಳಿಗೆ ಇಷ್ಟೊಂದು ಒತ್ತು ಸಿಕ್ಕಿದ್ದನ್ನು ಕಂಡು ವಾದಿರಾಜರಿಗೆ ಬಹಳ ಸಂತೋಷವಾಗಿತ್ತು. ಅಕಾಡೆಮಿಯ ಕನಸು ಕಾಣುತ್ತಲೇ ಇದ್ದರು. ಆದರೆ ಅವರಿರುವ ಕಾಲದಲ್ಲಿ ಅಕಾಡೆಮಿಯ ರಚನೆ ಆಗಲಿಲ್ಲವಾದರೂ ಅವರ ಕನಸು, ನನಸಾಯಿತು.

ವಾದಿರಾಜರಿಗೆ ಕೇವಲ ತಮ್ಮ ಬಗ್ಗೆ ಮಾತ್ರ ಯೋಚಿಸುವ ಪ್ರವೃತ್ತಿಯಿರಲಿಲ್ಲ. ಅದಕ್ಕೆ ಮೇಲಿನ ಸಂದರ್ಭ ಒಂದು ಉದಾಹರಣೆ. ಸಹ ಕಲಾವಿದರು, ಶಿಷ್ಯರು, ಆಸಕ್ತರು ಎಲ್ಲರ ಬಗೆಗೂ ಒಂದು ರೀತಿಯ ಕಾಳಜಿ. ಶಿಲ್ಪ ಕ್ಷೇತ್ರಕ್ಕೇ ತಮ್ಮನ್ನು ಅರ್ಪಿಸಿಕೊಂಡಿದ್ದರೆಂದರೆ ಉತ್ಪ್ರೇಕ್ಷೆಯಾಗಲಾರದು. ಇದಕ್ಕೆ ಇನ್ನೂ ಒಂದು ನಿದರ್ಶನವೆಂದರೆ 1977ನೇ ಇಸವಿಯಲ್ಲಿ ನಡೆದ ಇನ್ನೊಂದು ಘಟನೆ. ಭಾರತ ಸರ್ಕಾರದ ಹಸ್ತ ಕಲಾ ನಿಗಮದವರು

ವಿಕ್ಟೋರಿಯಾ ರಸ್ತೆಯಲ್ಲಿರುವ ಕೇಂದ್ರದಲ್ಲಿ ''ಅಂತರರಾಷ್ಟ್ರೀಯ ಕುಶಲಕಲಾವಿದರ ಮೇಳ''ವನ್ನು ಏರ್ಪಡಿಸಿದ್ದರು. ಒಂದು ವಾರದ ಮೇಳ ಕರ್ನಾಟಕ ಕುಶಲಕಲಾಮಂಡಲಿಯದೇ ಅಲ್ಲಿ ಪ್ರಮುಖ ಪಾತ್ರ. ವಾದಿರಾಜರಿಗೆ ಈ ಮೇಳದಲ್ಲಿ ಭಾಗವಹಿಸುವುದಕ್ಕೆ ಆಹ್ವಾನವೇ ಬರಲಿಲ್ಲ. ಪತ್ರಿಕೆಗಳಿಂದ ಸುದ್ದಿ ತಿಳಿಯಿತು. ಕೆಲವು ಮಿತ್ರರನ್ನು ವಿಚಾರಿಸಿದರು. ಅವರಿಗೂ ಆಹ್ವಾನ ಬಂದಿರಲಿಲ್ಲ. ಅಂತಹ ಒಂದು ಮೇಳಕ್ಕೆ ನಾಡಿನ ಪ್ರಮುಖ ಶಿಲ್ಪಿಯಾದ ತಮಗೆ ಆಹ್ವಾನ ಬಾರದೇ ಇರುವುದಿಲ್ಲವೆಂದೇ ಕಾದರು. ಬಹಳ ನಿರಾಸೆಯಾಯಿತು. ಆದರೆ ಸುಮ್ಮನೆ ಕೂಡಲಿಲ್ಲ. ಮೇಳದ ಉದ್ಘಾಟನೆಯಾದ ಮಾರನೆಯದಿನವೇ ಪತ್ರಿಕೆಗಳಿಗೇ ಬರೆದರು. ''ಅಂತರರಾಷ್ಟ್ರೀಯ ಮೇಳದಲ್ಲಿ, ದೇಶ ವಿದೇಶಗಳಿಂದ ಬರುವ ಕುಶಲಕಲಾವಿದರನ್ನು ನೋಡುವ, ಅವರೊಡನೆ ವಿಚಾರ ವಿನಿಮಯ ಮಾಡಿಕೊಳ್ಳುವ ಅವಕಾಶ, ನಾಡಿನ ಕುಶಲಕಲಾವಿದರಿಗೆ ಇಲ್ಲದ ಮೇಲೆ, ಅದರ ಪ್ರಯೋಜನ ಯಾರಿಗೆ ? ಕುಶಲ ಕಲಾವಿದರಿಗೆ ಒಂದು ಆಹ್ವಾನ ಪತ್ರಿಕೆಯನ್ನೂ ಕಳುಹಿಸುವ ಸೌಜನ್ಯವೂ ಇಲ್ಲದಿದ್ದ ಮೇಲೆ, ಕುಶಲಕಲಾವಿದರ ಏಳಿಗೆಗಾಗಿ ದುಡಿಯುವ ಇಂತಹ ಮಂಡಲಿ ಅಥವಾ ನಿಗಮದ ಪಾತ್ರವೇನು?'' ಎಂದು ಬಹಳ ಖಾರವಾಗಿಯೇ ಬರೆದರು. ಎಲ್ಲ ಪತ್ರಿಕೆಗಳಲ್ಲೂ ಪ್ರಕಟವಾಯಿತು. ನಿಗಮದ ಅಧ್ಯಕ್ಷಿಣಿಯಾಗಿದ್ದ ಶ್ರೀಮತಿ ಕಮಲಾದೇವಿ ಯವರಿಗೆ ದಿಗ್ಭ್ರಮೆಯಾಯಿತು. ಪತ್ರಿಕೆಗಳಿಗೆ ಕೊಟ್ಟ ಮೇಲೆ ಕಲಾವಿದರಿಗೆ ಆಹ್ವಾನ ಬೇರೆ ಬೇಕೆ ? ಅದನ್ನು ನೋಡಿಕೊಂಡು ಬರಲಿ ಎಂಬ ಧೋರಣೆಯಿಂದ ಆ ಮಂಡಲಿಯ ಅಧಿಕಾರಿಗಳು ಮಾಡಿದ ತಪ್ಪು ಇದು. ಆದರೆ ಸಮರ್ಥಿಸಿಕೊಳ್ಳಲು ದಾರಿಯಿರಲಿಲ್ಲ. ಸರಿ, ಮೇಳ ನಡೆಯುವ ಸ್ಥಳದಲ್ಲಿ ಕೂಡಲೇ ''ಸಾರ್ವಜನಿಕರಿಗೆ ಪ್ರವೇಶವಿಲ್ಲ''ವೆಂಬ ಫಲಕ ಸಿದ್ಧವಾಯಿತು. ಅದನ್ನು ಕಣ್ಣಾರೆಕಂಡ ವಾದಿರಾಜರಿಗೆ ಮತ್ತೂ ಬೇಸರವಾಯಿತು. ರಾಷ್ಟ್ರಪ್ರಶಸ್ತಿ ಕೊಟ್ಟು ಗೌರವಿಸಿದ ಹಸ್ತ ಕಲಾಮಂಡಲಿ ಈಗ ತಮ್ಮನ್ನು ಬರೀ ಸಾರ್ವಜನಿಕರ ಮಟ್ಟಕ್ಕೆ ಇಳಿಸಿತಲ್ಲಾ ಎಂದು ನೊಂದರು. ಪ್ರಶ್ನೆ ಮಾಡಿದರು. ವಾದ ವಿವಾದಗಳ ನಡುವೆ ಮೇಳವೇನೋ ಮುಗಿಯಿತು. ಆದರೆ ಕರ್ನಾಟಕ ಕುಶಲ ಕಲಾಮಂಡಲಿಯವರು ಸುಮ್ಮನೆ ಕೂಡಲಿಲ್ಲ. ಅದರ ನಂತರ ನಡೆದ ಸಭೆಗೆ

ವಾದಿರಾಜರಿಗೆ ಆಹ್ವಾನ ಬಂದಿತು. ''ಕುಶಲ ಕಲಾಮಂಡಲಿಯಿರುವುದು ಕುಶಲಕಲಾವಿದರ ಏಳಿಗೆಗಾಗಿ. ಆದರೆ ತಮ್ಮ ಕಷ್ಟ ಸುಖಗಳನ್ನು ಹೇಳಿಕೊಳ್ಳಲು ಈ ಮಂಡಲಿಯಲ್ಲಿ ಕುಶಲಕಲಾವಿದ ಸದಸ್ಯರೇ ಇಲ್ಲವಲ್ಲ ? ಬೇರೆಯವರು ಎಷ್ಟೇ ವಿದ್ಯಾವಂತರಿರಲೀ, ಕುಶಲ ಕಲೆಗಳ ಬಗ್ಗೆ ಎಷ್ಟೇ ತಿಳಿದುಕೊಂಡಿರಲೀ ಕ್ಷೇತ್ರದ ಕಲಾವಿದರಿಗಿರುವ ಅನುಭವ ಅವರಿಗೆ ಬರಲು ಸಾಧ್ಯವೆ ? ಅನುಭವಕ್ಕೆ ಬೆಲೆ ಬೇಡವೆ ?'' ಎಂದು ವಾದಿರಾಜರು ವಾದಿಸಿದರು. ಇದರಿಂದ ಎಲ್ಲಿಯೋ ಅಜ್ಞಾತವಾಗಿದ್ದು, ಕೆಲವೇ ಮಂದಿ ಸದಸ್ಯರಿದ್ದ ಕುಶಲಕಲಾಮಂಡಲಿಗೆ ನವ ಚೈತನ್ಯ ಬಂದಿತು. ಹೆಚ್ಚು ಹೆಚ್ಚು ಮಂದಿ ಕುಶಲಕಲಾವಿದರು ಸದಸ್ಯರಾದರು. ವಾದಿರಾಜರೇ ಉಪಾಧ್ಯಕ್ಷರಾಗಿ ಚುನಾಯಿತರಾದರು. ಆ ಮೂರು ವರ್ಷಗಳ ಮಂಡಲಿಯ ಕಾರ್ಯಕಲಾಪಗಳು ನೆನಪಿನಲ್ಲಿ ಉಳಿಯುವಂತಾಯಿತು. ಹೀಗೆ ವಾದಿರಾಜರು ಒಂದು ಸಮಾಜವಾಗಿ ಬೆಳೆದು ಬಂದವರು. ಅವರಿಗೆ ಗುರು ಮತ್ತು ಮಾರ್ಗದರ್ಶಿಗಳಾಗಿದ್ದ ಹರಿಹರ್ಕರವರ ಮಾತುಗಳನ್ನು ಯಾವಾಗಲೂ ನೆನೆಯುತ್ತಿದ್ದರು. ''ಕಲಾವಿದ ತಾನು ಬೆಳೆದರೆ ಸಾಲದು ಯಾವ ಕ್ಷೇತ್ರವೇ ಆಗಲಿ ಕಲಿಯುವ ಕಿರಿಯರೂ, ಆಸಕ್ತರೂ ಇದ್ದೇ ಇರುತ್ತಾರೆ ಅವರಿಗೆ ಕಲಿಸುವುದರ ಜೊತೆಗೆ, ತಾನು ಬದುಕುತ್ತಿರುವ ಸಮಾಜಕ್ಕೆ ಏನಾದರೂ ಸೇವೆ ಮಾಡಬೇಕು. ಆಗಲೇ ಕಲಿತ ವಿದ್ಯೆಗೂ ಒಂದು ಬೆಲೆ. ಸೇವೆ ಎಂದರೆ ಏನು ? ದಿನವೆಲ್ಲಾ ತನ್ನ ಬದುಕಿಗಾಗಿ ದುಡಿಯುವ ಯಾವ ವ್ಯಕ್ತಿಯಾಗಲೀ ಒಂದೆರಡು ಘಂಟೆಗಳನ್ನು ಬಡವರಿಗೂ ಕಲಿಸುವ ಅವಕಾಶ ಮಾಡಿಕೊಳ್ಳಬೇಕು. ಅದೇ ವ್ಯಕ್ತಿ ಸಮಾಜಕ್ಕೆ ನೀಡುವ ಕೊಡುಗೆ''. ಈ ಮಾತುಗಳನ್ನು ಯಾವಾಗಲೂ ನೆನಪಿಟ್ಟುಕೊಂಡಿದ್ದ ವಾದಿರಾಜರು, ಕೇವಲ ತಮಗಾಗಿ ಬದುಕಿದವರೇ ಅಲ್ಲ. ಇನ್ನೂ ಒಂದು ಹೆಜ್ಜೆ ಮುಂದೆಯಿದ್ದರೆಂದರೂ ತಪ್ಪಾಗಲಾರದು. ತಮ್ಮ ಸಹಕಲಾವಿದರ ಬಗ್ಗೆ, ಕಲಿಯುವ ಕಿರಿಯರ ಬಗ್ಗೆ ಅವರಿಗೆ ಕಾಳಜಿಯಿತ್ತು. ತಾವು ಕಲಿತಿದ್ದ ವಿಷಯಗಳನ್ನು ಏನೂ ಬಚ್ಚಿಟ್ಟುಕೊಳ್ಳದೆ, ಆಸಕ್ತರಿಗೆ ತಿಳಿಸುತ್ತಿದ್ದರು. ಕಲಿಸಲು ಹಣವನ್ನು ಎಂದೂ, ಯಾರಿಂದಲೂ ಪಡೆಯಲಿಲ್ಲ. ''ಈ ಶಿಲ್ಪ ಕಲಿಯುವುದಕ್ಕೆ ಮನಸ್ಸು ಮಾಡಿ ಬರುವುದೇ ಕಷ್ಟ. ಅಂತಹುದರಲ್ಲಿ ಯಾರಾದರೂ ಆಸಕ್ತಿಯಿಂದ ಬಂದರೆ, ನಾನೇಕೆ ಹೇಳಿಕೊಡುವುದಿಲ್ಲವೆಂದು

ಹೇಳಲಿ, ಯಾರ್ಯಾರಿಗೆ ಎಷ್ಟು ಲಭ್ಯವಿದೆಯೋ ಅಷ್ಟಷ್ಟು ಕಲಿಯಲಿ,'' ಎಂದು ಉದಾರ ಮನೋಭಾವದಿಂದ, ಕೈಯಿಂದ ಖರ್ಚುಮಾಡಿಕೊಂಡು ಕಲಿಸಿಕೊಡುತ್ತಿದ್ದರು. ಅಂತಹ ಹಿರಿಯ ವ್ಯಕ್ತಿಯ ಬಳಿ ಕಲಿಯುವ ಭಾಗ್ಯ ನನಗೂ ಲಭಿಸಿತ್ತು. ಅಷ್ಟೇ ಅಲ್ಲ ಹಲವಾರು ವರ್ಷಗಳು ಅಭ್ಯಾಸ ಮಾಡಿದ್ದಲ್ಲದೆ, ಅವರ ಕೆಲಸಗಳಲ್ಲೆಲ್ಲಾ ಭಾಗಿಯಾಗುವ ಅವಕಾಶವೂ ಸಿಕ್ಕಿ ಅವರ ಜೀವನದ ಬಗ್ಗೆ ಹೆಚ್ಚಿನ ವಿವರಗಳನ್ನು ಸಂಗ್ರಹಿಸಲು ಸಾಧ್ಯವಾಯಿತು.

## ಬಾಲ್ಯ

ವಾದಿರಾಜರು ಉತ್ತಮ ಶಿಲ್ಪಿಯಾಗಿದ್ದರು, ಉತ್ತಮ ಅವಕಾಶಗಳಿಗೆ ಕಾಯುತ್ತಿದ್ದರು. ಆದ್ದರಿಂದಲೇ ಅಷ್ಟೊಂದು ಸ್ಥಿತಿವಂತರಾಗಿರಲಿಲ್ಲ. ಹುಟ್ಟಿ, ಬೆಳೆದು, ಕಲಿತು ಬದುಕಿದ ದಿನಗಳು ಕೂಡ ಹೋರಾಟಮಯವೇ ಆಗಿತ್ತು. ಹೋರಾಟದ ಬದುಕಿಗಾಗಿಯೇ ಹುಟ್ಟಿದ ಜೀವ ಅವರದಾಗಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರದ ದೇವಲಕುಂದ ಗ್ರಾಮದಲ್ಲಿ ಸುಮಾರು 1920ರಲ್ಲಿ ವಾದಿರಾಜರ ಜನ್ಮವಾಯಿತು. ವೇದಾಧ್ಯಯನ ಮಾಡಿ ದೇವಲಕುಂದ ಗ್ರಾಮದ ವಿಷ್ಣು ಮಂದಿರದ ಅರ್ಚಕರಾಗಿದ್ದ ಸುಬ್ಬರಾಯಭಟ್ಟರು ತಂದೆ, ತಾಯಿ ಲಕ್ಷ್ಮಮ್ಮನವರು. ಹಠವಾದಿ ತಂದೆ, ಪಿತ್ರಾರ್ಜಿತ ಆಸ್ತಿಯನ್ನೂ ಕಳೆದದ್ದಲ್ಲದೆ ಯಾವಾಗಲೂ ಊರೂರು ಸುತ್ತುತ್ತಿದ್ದರು. ಜೊತೆಗೆ ಪತ್ನಿಯೊಡನೆ ವೈಮನಸ್ಯ. ಇಬ್ಬರೂ ಬೇರೆ ಬೇರೆ ಇದ್ದುದರಿಂದ ಮಗ ವಾದಿರಾಜನನ್ನು ತಮ್ಮೊಡನೆಯೇ ಇಟ್ಟುಕೊಂಡಿದ್ದರು ತಂದೆ ತಮ್ಮ ಬಳಿಯಿರುವಾಗ ಸಂಸ್ಕೃತ ಪಾಠದ ಅಭ್ಯಾಸ ಮಾಡಿಸಿದರು. ತಾಯಿಯ ಪ್ರೀತಿಯನ್ನೇ ಕಾಣದ ಹಸುಳೆ, ತಂದೆಯ ಬಳಿ ಕಳೆದದ್ದು ಒಂಭತ್ತು ವರ್ಷಗಳವರೆಗೆ ಮಾತ್ರ. ಯಾವುದೊ ಹಳ್ಳಿಯಲ್ಲಿದ್ದಾಗ ತಂದೆ ಇದ್ದಕ್ಕಿದ್ದಂತೆ ತೀರಿಕೊಂಡರು. ಒಂಭತ್ತು ವರ್ಷದ ಮುಗ್ಧ ಬಾಲಕನಿಗೆ ಸಾವಿನ ದರ್ಶನವಾಗಿತ್ತು. ಜೊತೆಯಲ್ಲಿ ಯಾರೂ ಇಲ್ಲ. ಒಂಟಿ ಮನೆ, ಸುತ್ತ ಮುತ್ತಲಿನ ಜನದ ಬಳಿ ಹೋಗಬೇಕಾದರೂ ಸುಮಾರು ದೂರ ಹೋಗಬೇಕಿತ್ತು. ಹೇಗೋ ಜನರನ್ನು ಸೇರಿಸಿ, ತಂದೆಯ ಸಂಸ್ಕಾರವನ್ನು ಮುಗಿಸಿ, ಉಡುಪಿಯಲ್ಲಿದ್ದ ತಾಯಿಯ ಬಳಿ ಹೋದರು. ಒಬ್ಬನೇ ಮಗನಾಗಿದ್ದ

ವಾದಿರಾಜರಿಗೆ ತಾಯಿಯ ಪ್ರೀತಿಯ ಮಡಿಲು ಸಿಕ್ಕಿದರೂ, ಮತ್ತೆ ಕಾಡುವ ಬಡತನ ಉಡುಪಿಯಲ್ಲಿ ಏನೂ ಮಾರ್ಗ ಕಾಣದೆ, ಮೈಸೂರಿಗೆ ತಾಯಿ ಮಗ ಹೊರಟರು. ವರ್ಷದ ಹಿಂದೆ ಉಡುಪಿಗೆ ಬಂದ ಯಾರೋ ಮೈಸೂರಿನ ಯಾತ್ರಾರ್ಥಿಗಳು, ಮೈಸೂರಿಗೆ ಬಂದರೆ ಅಡುಗೆ ಕೆಲಸವನ್ನು ಕೊಡಿಸುವುದಾಗಿ ಹೇಳಿದ್ದನ್ನು ನೆಚ್ಚಿಕೊಂಡು, ಮೈಸೂರನ್ನೇನೋ ತಲುಪಿದರು. ಕೆಲಸ ಕೊಡುವುದಾಗಿ ಹೇಳಿದವರು ವಿಧವೆಯಾಗಿದ್ದ ಲಕ್ಷ್ಮಮ್ಮನವರನ್ನು ಇಟ್ಟುಕೊಳ್ಳಲು ಸಿದ್ಧರಿರಲಿಲ್ಲ. ಲಕ್ಷ್ಮಮ್ಮನವರು ನಂಬಿ ಬಂದ ಆಸರೆ ದೊರೆಯದಿದ್ದಾಗ ಮುಂದೇನು ಎಂದು ಗಾಬರಿಯಾಯಿತು. ಗುರುತರಿಯದ ಜಾಗದಲ್ಲಿ ಅನಾಥರಾಗಿ ತಾಯಿಮಗ ಕೊತ್ವಾಲರಾಮಯ್ಯನ ಬೀದಿಯಲ್ಲಿ ಸಾಗುತ್ತಿದ್ದಾಗ, ಇವರನ್ನು ಕಂಡು ಆದರಿಸಿ ಕರೆದವರು ಖ್ಯಾತ ವಿದ್ವಾಂಸರಾಗಿದ್ದ ಪಿಟೀಲು ಚೌಡಯ್ಯನವರ ತಾಯಿ, ಮೀನಾಂಬ ಎನ್ನುವವರು. ಅವರ ಬಳಿ ಬಂದೊಡನೆ ದುಃಖದ ಕಟ್ಟೆಯೊಡೆಯಿತು, ತಮ್ಮ ವಿಚಾರವನ್ನೆಲ್ಲಾ ತೋಡಿಕೊಂಡರು, ''ಯೋಚಿಸಬೇಡಿ, ರಾಮ ಇದ್ದಾನೆ, ಮೊದಲು ಏನಾದರೂ ಹೊಟ್ಟೆಗೆ ಮಾಡಿಕೊಳ್ಳಿ, ಮಗು ಹಸಿದಿದೆ'' ಎಂದು ಕನಿಕರದಿಂದ ಒಳಗೆ ಕರೆದು, ಮನೆಯಲ್ಲೇ ಇರಲು ಅವಕಾಶ ಮಾಡಿಕೊಟ್ಟರು. ಬಾಲಕ ವಾದಿರಾಜನನ್ನು ಶಾಲೆಗೂ ಸೇರಿಸಿದರು. ಶಾಲೆಯಲ್ಲಿ ಮಾತ್ರ ವಾದಿರಾಜರು ಏನೇನೂ ಪ್ರಗತಿ ತೋರಿಸಲಿಲ್ಲ. ಯಾವಾಗಲೂ ಹಿಂದಿನ ಬೆಂಚಿನಲ್ಲಿ ಕುಳಿತು ಯಾವುದಾದರೂ ಚಿತ್ರ ಬಿಡಿಸುತ್ತಿದ್ದರು. ಇದರಿಂದ ಬೇರೆ ಮಕ್ಕಳು ಕೂಡ ಪಾಠ ಗಮನಿಸದೆ ಇದನ್ನು ನೋಡುವ ಕುತೂಹಲ ತೋರುತಿದ್ದುದು ಸಹಜ. ಹಾಗಾಗಿ ಅದನ್ನು ನೋಡಿದ ಉಪಾಧ್ಯಾಯರು ಇವರ ತಾಯಿಯವರನ್ನು ಕರೆದು ''ನಿಮ್ಮ ಮಗನಿಗೆ ಓದಲು ಆಸಕ್ತಿಯಿಲ್ಲ. ಡ್ರಾಯಿಂಗ್ ಮಾತ್ರ ಚೆನ್ನಾಗಿ ಮಾಡುತ್ತಾನೆ. ಚಾಮರಾಜೇಂದ್ರ ಕಲಾಶಾಲೆಗಾದರೂ ಸೇರಿಸಿ ಅಲ್ಲಿ ಫೀಜು, ಪುಸ್ತಕಾಂತ ತಾಪತ್ರಯವೂ ಇರುವುದಿಲ್ಲ'' ಎಂದರಂತೆ. ಹೀಗಾಗಿ ಮಗನನ್ನು ಚಾಮರಾಜೇಂದ್ರ ಕಲಾಶಾಲೆಗೆ ಕರೆದೊಯ್ದರು.

## ಚಾಮರಾಜೇಂದ್ರ ಕಲಾಶಾಲೆಯಲ್ಲಿ

ಕಲಾಶಾಲೆ ವಾದಿರಾಜರನ್ನು ಬಹಳ ಆಕರ್ಷಿಸಿತು. ಅಲ್ಲಿಯ ನಿರ್ದೇಶಕರು ಹುಡುಗನಿಗೆ ಅಲ್ಲಿ ನಡೆಯುತ್ತಿದ್ದ ತರಗತಿಗಳನ್ನು ನೋಡಿಬರಲು ಹೇಳಿದರು.



ಚಂದ್ರಶೇಖರ

ಅಲ್ಲಿಯ ಚಿತ್ರಕಲೆ, ಕಲ್ಲು ಮರಗಳ ಕೆತ್ತನೆಯ ಕೆಲಸ, ಬೆತ್ತದ ಹೆಣಿಗೆ, ಇನ್‌ಲೇ, ಗಂಧದ ಮರದ ಕೆತ್ತನೆ ಎಲ್ಲವೂ ಬಹಳ ಆಕರ್ಷಿಸಿತ್ತು. ಅದರಲ್ಲೂ ರೇಖಾಚಿತ್ರ ಬಿಡಿಸಿಕೊಂಡು ಬಣ್ಣ ತುಂಬುವ ಚಿತ್ರಕಲೆ ಬಹಳ ಪ್ರಿಯವಾಗಿ ಕಂಡಿತು. ''ಮಗು ನೀನು ಏನು ಕಲಿಯಬೇಕೂಂತ ಆಸೆಯಾಗುತ್ತೆ? ಎಂದರಂತೆ'' ನನಗೆ ಚಿತ್ರ ಬರೆದು ಬಣ್ಣ ಹಾಕುವುದು ಇಷ್ಟ'' ಎಂದರಂತೆ. ಆದರೆ ನಿರ್ದೇಶಕರು

ಅದು ಬೇಡ, ಗಂಧದ ಕೆತ್ತನೆಗೆ ಸೇರು. ಅಲ್ಲಿ ಚಿತ್ರವನ್ನೂ ಬರೆಯಬಹುದು, ಕೆತ್ತಿ ಆಕಾರವನ್ನೂ ಮಾಡಬಹುದು.'' ಎಂದು ಗಂಧದ ಕೆತ್ತನೆಯ ವಿಭಾಗಕ್ಕೆ ಸೇರಿಸಿಕೊಂಡರು. ವಾದಿರಾಜರಿಗೆ ನಿರಾಸೆಯಾಯಿತು.

## ಖ್ಯಾತ ಗುಡಿಗಾರರು ಶ್ರೀವೆಂಕಪ್ಪಯ್ಯ - ಶ್ರೀಗಣಪತಪ್ಪ ಅವರಲ್ಲಿ ಅಭ್ಯಾಸ

ಕೆತ್ತನೆಯ ವಿಭಾಗದಲ್ಲಿ ಅಂದು ಗುರುಗಳಾಗಿದ್ದವರು ಖ್ಯಾತ ಗುಡಿಗಾರರಾಗಿದ್ದ ಶ್ರೀ ವೆಂಕಪ್ಪಯ್ಯ ಹಾಗೂ ಶ್ರೀ ಗಣಪತಪ್ಪ ಅವರು, ಕೆತ್ತನೆಯಲ್ಲಿ ಅದ್ವಿತೀಯ ಪಾಂಡಿತ್ಯ ಪಡೆದಿದ್ದವರು. ಗಂಧದ ಕೆತ್ತನೆಯೆಂದರೆ ಬಹಳ ಸೂಕ್ಷ್ಮ ಹಾಗೂ ಸುಂದರ ಅವರಿಬ್ಬರೂ ಕೆತ್ತನೆಗೆ ಮುಂಚೆ ಮಾಡಿಕೊಳ್ಳುತ್ತಿದ್ದ ರೇಖಾ ಚಿತ್ರಗಳು ಇವರನ್ನು ಬೆರಗುಗೊಳಿಸುತ್ತಿತ್ತು. ಅಷ್ಟೊಂದು ಸೂಕ್ಷ್ಮ ಹಾಗೂ ಅಚ್ಚುಕಟ್ಟಾಗಿದ್ದವು. ಕೆತ್ತನೆ ಮಾಡುವಾಗಲೂ ರೇಖೆ ಬರೆದಂತೆಯೇ ಕೆತ್ತುತ್ತಿದ್ದು ವಿಶೇಷವಾಗಿತ್ತು. ಅವರ ಕೆತ್ತನೆಯ ವೈಶಿಷ್ಟ್ಯ ಕ್ರಮೇಣ ಇವರನ್ನು ಮೋಡಿಗೆ ಒಳಗಾದವರಂತೆ ಮಾಡಿ, ಚಿತ್ರದ ಬಣ್ಣಗಳ ಆಕರ್ಷಣೆಯನ್ನು ಮರೆಯಿಸಿತು. ಕಲಿಯುತ್ತಿದ್ದ ವಿದ್ಯಾರ್ಥಿಗಳಲ್ಲೇ ಚಿಕ್ಕವನಾದ ಈ ಹುಡುಗ ರೇಖಾ ಚಿತ್ರವನ್ನು ಚೆನ್ನಾಗಿ ಬರೆಯುವುದನ್ನು ಕಂಡು, ಇಬ್ಬರು ಗುರುಗಳಿಗೂ ಮೆಚ್ಚುಗೆಯಾಗಿ, ಅತ್ಯಂತ ಆಸಕ್ತಿಯಿಂದ ಆದರದಿಂದ ಕೆತ್ತನೆಯನ್ನು ಕಲಿಸಿದರು. ಶಾಲೆಯ ವೇಳೆ ಮುಗಿದ ಮೇಲೂ ತಾವು ಮನೆಯಲ್ಲಿ ಮಾಡುತ್ತಿದ್ದ ಕೆಲಸ ನೋಡಲು ಕರೆದುಕೊಂಡು ಹೋಗುತ್ತಿದ್ದರು. ಕೆತ್ತನೆ ಮಾಡುವ ವಿಧಾನವನ್ನು ಸಾಮಾನ್ಯವಾಗಿ ಯಾರೂ ತೋರಿಸುವುದಿಲ್ಲ. ಹೀಗಾಗಿ ಪೂರ್ಣ ಅಭ್ಯಾಸಕ್ಕೆ ಅವಕಾಶ ಸಿಕ್ಕಿದ್ದು ವಾದಿರಾಜರ ಪುಣ್ಯವೆನ್ನಬಹುದು. ಸುಮಾರು ಒಂದೂವರೆ ವರ್ಷ ಮಾತ್ರ ಈ ರೀತಿಯ ಕಲಿಕೆ ನಡೆಯಿತು. ಅಷ್ಟರಲ್ಲಿ ತಾಯಿಯವರಿಗೆ ಬರುತ್ತಿದ್ದ ವರಮಾನ ಕಡಿಮೆಯಾಯಿತು. ಜೀವನ ನಿರ್ವಹಣೆಗೇ ತೊಂದರೆಯಾದಾಗ ''ನಂಜನ ಗೂಡಿಗೆ ಹೋದರೆ, ಅಲ್ಲಿ ಶಿವಕೂಟದಲ್ಲಿ ಊಟವಾದರೂ ಸಿಗುತ್ತದೆ'' ಎಂದು ಯಾರೋ ಹೇಳಿದ ಮೇರೆಗೆ, ತಾಯಿಮಗ ನಂಜನಗೂಡಿಗೆ ಬಂದರು. ಕಲಿಕೆ ಅಲ್ಲಿಗೇ ನಿಂತಿತು. ಸಾಮಾನ್ಯ ವಿದ್ಯಾಭ್ಯಾಸದಲ್ಲಿ ಆಸಕ್ತಿಯಿರದಿದ್ದ ಬಾಲಕನಿಗೆ ಗಂಧದ ಕೆತ್ತನೆ

ಬಹಳವಾಗಿಯೇ ಆಕರ್ಷಿಸಿತ್ತು. ಬಲವಂತವಾಗಿ ಅದನ್ನೂ ಬಿಟ್ಟು ನಂಜನಗೂಡಿಗೆ ಹೋಗಬೇಕಾದ ಪ್ರಸಂಗ ಬಂದಿದ್ದು ಬಹಳ ನೋವನ್ನುಂಟುಮಾಡಿತು. ಅಲ್ಲಿ ಹೋದ ಮೇಲೆ ಮತ್ತೆ ಶಾಲೆಗೆ ಸೇರಿಸಿದರೂ ಅಕ್ಷರವಿದ್ಯೆ ವಾದಿರಾಜರನ್ನು ಆಕರ್ಷಿಸಲಿಲ್ಲ. ಶಾಲೆಗೆ ಚಕ್ಕರ್ ಹೊಡೆದು, ದೇವಾಲಯದಲ್ಲೇ ಕಾಲ ಕಳೆಯುತಿದ್ದರು. ನಂಜುಂಡೇಶ್ವರ ಬೃಹತ್ ದೇವಾಲಯ, ಅದರಲ್ಲಿದ್ದ  ಶಿಲ್ಪಗಳೂ, ಶಿವಲೀಲಾ ಮೂರ್ತಿಗಳೂ, ಒಂದಕ್ಕಿಂತ ಒಂದು ಸುಂದರವಾಗಿ ಕಂಡು, ಯಾವುದೋ ಸ್ವಪ್ನಲೋಕದಲ್ಲಿದ್ದಂತಿತ್ತು. ತಂದೆಯ ಬಳಿ ಕಲಿತ ಶ್ಲೋಕಗಳಲ್ಲಿ ಬರುವ ದೇವರ ವರ್ಣನೆಗಳು ಇಲ್ಲಿ  ಸಾಕಾರಗೊಂಡಿದ್ದನ್ನು ಕಂಡು, ತಾನೂ ಶಿಲ್ಪ ಮಾಡಬೇಕೆಂಬ ಬಯಕೆ ಮೂಡುತ್ತಿತ್ತು. ಆದರೆ ಉಳಿ, ಸುತ್ತಿಗೆ ಮರ ಯಾವುದೂ ಬಳಿಯಿರಲಿಲ್ಲ.  ಕೇವಲ ಅಲ್ಲಿ ಇಲ್ಲಿ ಬಿದ್ದಿದ್ದ ಇಜ್ಜಲ ತುಂಡುಗಳೇ ಇವರ ಲೇಖನಿ. ಎಲ್ಲಿ ಜಾಗ ಸಿಕ್ಕರೇ ಅಲ್ಲಿಯೇ ಚಿತ್ರಣ ಪ್ರಾರಂಭ. ಬರೀ ರೇಖಾ ಚಿತ್ರಗಳನ್ನೇ ಬಿಡಿಸುತ್ತ, ಅದನ್ನೇ ನೋಡಿ ಸಂತೋಷಪಟ್ಟುಕೊಂಡು,  ಬಯಕೆ ತೀರಿಸಿಕೊಳ್ಳುತಿದ್ದರು. ಅಷ್ಟು ಚಿಕ್ಕ ವಯಸ್ಸಿನ ಹುಡುಗ ಇಷ್ಟು ಚೆನ್ನಾಗಿ ಚಿತ್ರ ಬಿಡಿಸುವುದನ್ನು ನೋಡಿ, ಕೆಲವರು ಮತ್ತೆ ಮೈಸೂರಿಗೆ ಹೋಗಲು ಹೇಳುತ್ತಿದ್ದರು. ಒಂದೆರಡು ವರ್ಷಗಳು ಕಳೆಯುವುದರಲ್ಲಿ ತಾಯಿಗೆ ಖಾಯಿಲೆ ಬಂದಿತು. ಚಿಕಿತ್ಸೆಗಾಗಿ ಮೈಸೂರಿನ ಆಯುರ್ವೇದ ಆಸ್ಪತ್ರೆಗೆ ಬರಬೇಕಾಯಿತು. ''ನಾರ್ಣಾಚಾರ್ಯರ ಹೋಟೆಲ್'' ಎಂದು ದೋಸೆಗೆ ಪ್ರಸಿದ್ಧವಾಗಿದ್ದ ಹೋಟೆಲ್‌ನಲ್ಲಿ ಹಿಂದೆ ಅವರ ತಾಯಿ ಹಿಟ್ಟು ರುಬ್ಬುತ್ತಿದ್ದರು. ತಾಯಿ ಮಗ ಅಲ್ಲೇ ಹೋದರು. ತಾಯಿ ಆಸ್ಪತ್ರೆ ಸೇರಬೇಕಾಯಿತು. ಬಾಲಕ ವಾದಿರಾಜ ವಿಧಿಯಿಲ್ಲದೆ ಹೋಟೆಲಿನಲ್ಲಿ ದುಡಿಯಲು ಸೇರಬೇಕಾಯಿತು. ಆಸ್ಪತ್ರೆಗೆ ಸೇರಿದ ತಾಯಿಯವರ ಖಾಯಿಲೆ ಉಲ್ಬಣವಾಗಿ ತೀರಿಕೊಂಡಾಗ  ವಾದಿರಾಜರಿಗೆ ಕೇವಲ 13 ವರ್ಷಗಳು. ತಮ್ಮವರೆಂಬುವರು  ಯಾರೂ ಇರಲಿಲ್ಲ. ಅಂತ್ಯ ಸಂಸ್ಕಾರ ನಡೆಸಲೂ ಹಣವಿಲ್ಲ. ಬ್ರಾಹ್ಮಣಸಭೆಗೆ ಹೋಗಿ ಕೇಳಿಕೊಂಡು, ತಾಯಿಯ ಅಂತ್ಯಕ್ರಿಯೆಗಳನ್ನು ಹೇಗೋ ಮುಗಿಸಿದರು.

ಉತ್ತರ ಕ್ರಿಯೆಗಳನ್ನೆಲ್ಲ ಮುಗಿಸುವುದರಲ್ಲಿ ವಿಷಮಶೀತ ಜ್ವರಕ್ಕೆ ತುತ್ತಾದರು. ಮತ್ತೆ ಇವರನ್ನೂ ಯಾರೋ ಕರೆದುಕೊಂಡು ಹೋಗಿ ಆಯುರ್ವೇದ ಆಸ್ಪತ್ರೆಗೇ ಸೇರಿಸಿದರು. ಪರಿಸ್ಥಿತಿ ವಿಷಮವಾಗಿ ಉಳಿಯುವ ನಂಬಿಕೆಯೇ ಇರದಿದ್ದರೂ ಹೇಗೊ ಚೇತರಿಸಿಕೊಂಡ ಬಾಲಕನನ್ನು ನೋಡಿ, ಅಲ್ಲಿಯ ವೈದ್ಯರಿಗೆ ಪವಾಡಕಂಡಂತಾಗಿತ್ತು. "ಲೋ ನಿನ್ನಿಂದ ಏನೋ ಆಗಬೇಕಾಗಿದೆ. ಅದಕ್ಕೇ ದೇವರು ನಿನಗೆ ಆಯಸ್ಸು ಕೊಟ್ಟಿದ್ದಾನೆ" ಎಂದು ಹೇಳಿಕಳುಹಿಸಿದರು. ಆ ವೈದ್ಯರ ತಂಡದಲ್ಲಿ ಡಾ. ಸಂಪತ್ಕೈಂಗಾರ್ ಎಂಬುವರು ವಾದಿರಾಜರ ಬಗ್ಗೆ ವಿಶೇಷ ಆಸಕ್ತಿ ತಳೆದಿದ್ದರು. ಅಲ್ಲಿ ಇಟ್ಟಿರುತ್ತಿದ್ದ ಸೋಪಿನಲ್ಲಿ ಮಲಗಿದ ಕಡೆಯೇ ಒಂದು ಸುಂದರವಾದ ನಂದಿಯನ್ನು ಮಾಡಿದ್ದರು. ಅದನ್ನು ನೋಡಿ ಡಾ. ಸಂಪತ್ಕೈಂಗಾರ್ಯರು ಇವರನ್ನು ಬಹಳ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಮುಂದೆಯೂ ಅವರಿಂದ ಸಹಾಯ ಸಿಕ್ಕಿತು.

---

## ತೀರದ ಕನಸು

---

ಆಸ್ಪತ್ರೆ ಬಿಟ್ಟ ನಂತರ ಮತ್ತೆ ಹೋಗುವುದೆಲ್ಲಿಗೆ ? ನಾರ್ಣಾಚಾರ್ಯರ ಹೋಟಲಿಗೇ ಬರಬೇಕಾಯಿತು. ಕೆತ್ತನೆ ಕಲಿಯಲು ಅವಕಾಶವೆಲ್ಲಿ ? ಬರೀ ದುಡಿಮೆ. ಇದರಿಂದ ಬೇಸರಗೊಂಡು ಹೇಳದೆ ಕೇಳದೆ ಮೈಸೂರು ಬಿಟ್ಟು ಹೊರಟರು. ಶಿವಮೊಗ್ಗ, ಸಾಗರ, ಹೊಸನಗರ, ಹುಬ್ಬಳ್ಳಿ ಹೀಗೆ ಒಂದಲ್ಲ ಎರಡಲ್ಲ, ಉತ್ತರ ಕರ್ನಾಟಕವೆಲ್ಲ ಸುತ್ತಿದರು. ಎಲ್ಲಿ ಹೋದರೇನು ? ಕೆತ್ತನೆ ಮಾಡುವುದಕ್ಕೆ ಅವಕಾಶವೆಲ್ಲಿ ? ಜೀವನಕ್ಕಾಗಿ ಮತ್ತೆ ಮತ್ತೆ ಹೋಟಲಿಗೆ ಹೋಗಬೇಕಾದ ಪರಿಸ್ಥಿತಿ, ಅಲ್ಲಿಯೇ ದುಡಿಮೆ, ಕೊನೆಯಿಲ್ಲದೆ ದುಡಿದು ಹೀಗೆ ಆರೇಳು ವರ್ಷಗಳು ಕಳೆದ ಮೇಲೆ ಸಾಗರದ ಬಳಿ ತುಂಬರಿ ಎಂಬ ಊರಲ್ಲಿ ಅಡಿಕೆ ತೋಟದಲ್ಲಿ ಮೇಸ್ತ್ರಿ ಕೆಲಸ ಸಿಕ್ಕಿತು. ಎತ್ತರದ ಅಡಿಕೆ ಮರಗಳ ಮಧ್ಯೆ ಬೆಳಕನ್ನೇ ಕಾಣದೆ ಕೂರುತ್ತಿದ್ದ ದಿನಗಳೆಷ್ಟೊ ! ಇದೇ ಸಮಯದಲ್ಲಿ ಯಾರದೋ ಅಡಿಕೆಯ ತೋಟಕ್ಕೆ ಕೆಲಸಕ್ಕೆ ಕರೆದುಕೊಂಡು ಹೋದವರು ಮದುವೆಯನ್ನೂ ಮಾಡಿಸಿದರು. ಚಿಕ್ಕ ವಯಸ್ಸಿನಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡು ಸೋದರ ಮಾವನ ಮನೆಯಲ್ಲಿದ್ದ "ನಾಗಮ್ಮ" ಇವರ ಪತ್ನಿಯಾದರು. ಅಲ್ಲೇ ಅಡಿಕೆ ತೋಟದಲ್ಲೇ ಮೇಸ್ತ್ರಿಯ ಕೆಲಸವೂ ಸಿಕ್ಕಿತು.

ಹೊಸದಾಗಿ ಮದುವೆಯಾಗಿ ಹೊಸ ಜೀವನ ಪ್ರಾರಂಭಿಸಿದರೂ ಯಾವ ಹೊಸತನವನ್ನೂ ಕಾಣದೆ, ಹೆಂಡತಿಯನ್ನು ತವರಿನಲ್ಲಿಯೇ ಬಿಟ್ಟು, ಹೇಳದೆ ಕೇಳದೆ ಮತ್ತೆ ಅಲೆದಾಟ ಪ್ರಾರಂಭಿಸಿದರು. ಹತ್ತಾರು ವರ್ಷಗಳ ಅಲೆದಾಟದಲ್ಲಿ ಶಿಲ್ಪದ ಬಗ್ಗೆ ಯೋಚಿಸುವುದಕ್ಕೆ ವ್ಯವಧಾನವೂ ಇಲ್ಲದೆ, ಮನಸ್ಸಿಗೆ ನೆಮ್ಮದಿಯಿಲ್ಲದೆ ಇದ್ದರೂ, ಹಲವಾರು ತರಹದ ಜನಗಳ, ಭಾಷೆಗಳ, ಸಂಸ್ಕೃತಿಗಳ, ಪರಿಚಯವಾಯಿತು. ಗದಗದಲ್ಲಿದ್ದಾಗ ಪಂಚಾಕ್ಷರಿಗವಾಯಿಗಳ ಮಠದ ಬಳಿಯೇ ಒಂದು ಹೋಟೆಲಿನಲ್ಲಿ ಉದ್ಯೋಗ ಮಾಡುತ್ತಿದ್ದರಂತೆ. ಹುಟ್ಟು ಕುರುಡರಾದ ಪಂಚಾಕ್ಷರೀ ಗವಾಯಿಗಳು ಸಂಗೀತ ವಿದ್ಯೆಯನ್ನು ಸಾಧಿಸಿ, ತಮ್ಮಂತೆಯೇ ಅನಾಥರಾದ ಹಲವಾರು ವಿದ್ಯಾರ್ಥಿಗಳಿಗೇ ವಿದ್ಯಾದಾನ ಮಾಡುತ್ತಿದ್ದವರು. ಆ ಸಮಯವನ್ನು ವಾದಿರಾಜರು ಯಾವಾಗಲೂ ನೆನಯುತ್ತಿದ್ದರು. ''ಮಠದಲ್ಲಿ ಯಾವಾಗ ನೋಡಿದರೂ ಪೂಜೆ, ಮಂಗಳಾರತಿ, ಸಂಗೀತ ಯಾರು ನೋಡಿದರೂ, ಯಾವಾಗಲೂ, ಏನಾದರೂ ಗುನುಗುತ್ತಲೇ ಇದ್ದರು. ಯಾವ ಕಲೆಯಾದರೇನಂತೆ, ಸಾಧಿಸಬೇಕಾದುದು ಹೀಗಲ್ಲವೆ? ನಾನೋ ಅದರ ಬಗ್ಗೆ ಯೋಚನೆಯನ್ನೂ ಮಾಡಲಾರದ ಸ್ಥಿತಿಯಲ್ಲಿದ್ದೆ. ಬೇಡದ ಕೆಲಸಗಳನ್ನೂ ಮಾಡಿಕೊಂಡಿದ್ದೆ. ನಾನು ಕಂಡಿದ್ದ ಕನಸೇನು ? ಆಗಿರುವುದು ಏನು?'' ಎಂದು ನಿರಂತರ ಕೊರಗುವಂತಾಗಿತ್ತು.

## ಬಯಸಿದ ಬದುಕು

''ಬದುಕಿದರೆ ಕೆತ್ತನೆ ಮಾಡಿ ಬದುಕೋಣ, ಇಲ್ಲದಿದ್ದರೆ ಈ ಜೀವನವೇ ಬೇಡ'' ಎಂದು ತೀರ್ಮಾನಿಸಿ, ಮೈಸೂರಿಗೇ ಮತ್ತೆ ಬಂದರು. ಎಷ್ಟಾದರೂ, ವಿದ್ಯೆ ಕಲಿತ ಜಾಗ, ಏನಾದರೂ ಅವಕಾಶ ಸಿಗಬಹುದು ಎಂದು ಆ ಸಮಯದಲ್ಲಿ ಆದರಿಸಿ, ಧೈರ್ಯತುಂಬಿ, ಇವರ ಹೊಸ ತೀರ್ಮಾನಕ್ಕೆ ಪ್ರೋತ್ಸಾಹ ಕೊಟ್ಟವರು ಇವರ ಬಾಲ್ಯ ಸ್ನೇಹಿತ ಶ್ರೀ ಎಸ್. ನಾರಾಯಣಮೂರ್ತಿ ಎಂಬುವರು. ಶ್ರೀ ನಾರಾಯಣ ಮೂರ್ತಿಯವರು ಆ ವೇಳೆಗೆ ಓದು ಮುಗಿಸಿ, ಟೈಪ್‌ರೈಟಿಂಗ್, ಶಾರ್ಟ್‌ಹಾಂಡ್‌ನಲ್ಲಿ ಅದ್ವಿತೀಯ ಪಾಂಡಿತ್ಯಗಳಿಸಿ, ಕೆಲಸದಲ್ಲಿದ್ದರು. ಸಂಗೀತಾಭ್ಯಾಸ ಮಾಡುತ್ತಿದ್ದವರು ವಾದಿರಾಜರ ಮನಸ್ಸನ್ನು ಅರಿತವರು,

"ಎಷ್ಟು ದಿನಾಂತ ಹೀಗೆ ಅಲೆಯುತ್ತೀಯಾ ? ಬದುಕಿದರೆ ಕೆತ್ತನೆ ಮಾಡಿ ಬದುಕುತ್ತೀನೀಂತ ತೀರ್ಮಾನ ಮಾಡಿಕೋ, ಆ ಹೋಟೆಲ್ ಈ ಹೋಟೆಲ್ ಕೆಲಸಗಳನ್ನೆಲ್ಲಾ ಬಿಟ್ಟುಬಿಡು. ನಾನೂ ಇದ್ದೀನಿ, ಖಂಡಿತಾ ಯೋಚಿಸಬೇಡ" ಎಂದು ಹೇಳಿದ್ದು ಮಾತ್ರವಲ್ಲ ಸಹಾಯವನ್ನೂ ಮಾಡಿದರು. "ಆ ದಿನ ಅವನು ಪ್ರೋತ್ಸಾಹ ಕೊಟ್ಟದ್ದನ್ನು ಮರೆಯುವಂತೆಯೇ ಇಲ್ಲ" ಎನ್ನುತ್ತಿದ್ದ ವಾದಿರಾಜರು ನಾರಾಯಣ ಮೂರ್ತಿಯವರ ಸ್ನೇಹವನ್ನು ಕಡೆಯತನಕ ಉಳಿಸಿಕೊಂಡಿದ್ದರು. ಬೆಂಗಳೂರಿನಲ್ಲೇ ಬಂದು ನೆಲೆಸಿದ ನಾರಾಯಣ ಮೂರ್ತಿಯವರು ಎರಡು ದಿನಕ್ಕೊಮ್ಮೆಯಾದರು ಇವರನ್ನು ನೋಡಲು ಬರುತ್ತಿದ್ದರು. ನಾರಾಯಣ ಮೂರ್ತಿ ಎಂದರೆ ವಾದಿರಾಜರಿಗೆ ವಿಶೇಷವಾದ ಗೌರವ, ಪ್ರೀತಿ. ಮೈಸೂರಿಗೆ ಬಂದು ನಾರಾಯಣಮೂರ್ತಿಯವರ ಜೊತೆ ಇರಲು ಪ್ರಾರಂಭಿಸಿದ ಮೇಲೆ ಅಚ್ಯುತರಾವ್ ಎಂಬುವರ ಅಂಗಡಿಯಲ್ಲಿ ಗಂಧದ ಕೆತ್ತನೆ ಮಾಡಲು ಪ್ರಾರಂಭಿಸಿದರು. ಅದೇ ಸಮಯದಲ್ಲಿ ಇವರನ್ನು ಚಿಕ್ಕ ವಯಸ್ಸಿನಲ್ಲಿ ಆಯುರ್ವೇದ ಆಸ್ಪತ್ರೆಯಲ್ಲಿ ಚಿಕಿತ್ಸೆ ಮಾಡಿದ್ದ ಡಾ. ಸಂಪತ್ಕೈಂಗಾರ್ಯರು ಸಿಕ್ಕಿದರು. ಇವರ ಬವಣೆಗಳನ್ನೆಲ್ಲಾ ಕೇಳಿದ ಮೇಲೆ "ನನ್ನ ಮನೆಯಲ್ಲೇ ಬಂದಿರೋ ವಾದಿರಾಜ. ಮನೆಯಲ್ಲೇ ಏನಾದರೂ ಸಹಾಯ ಮಾಡಿಕೊಂಡು, ಕೆತ್ತನೆಯ ಕೆಲಸವನ್ನೂ ಮಾಡು" ಎಂದು ಪ್ರೀತಿಯಿಂದ ಕರೆದರು. ಇರಲು ನೆಲೆ, ಎರಡು ಹೊತ್ತು ಊಟ ಸಿಕ್ಕಿತು. ಅವರ ಮನೆಯ ಸಣ್ಣ ಪುಟ್ಟ ಕೆಲಸಗಳನ್ನು ಮಾಡುತ್ತಾ, ಮತ್ತೆ ಕೆತ್ತನೆಯ ಕೆಲಸಕ್ಕೆ ಮನಕೊಟ್ಟರು. ಕೊನೆಗೂ ಬಯಸಿದ ಕೆಲಸ ಮಾಡಲು ಪ್ರಾರಂಭಿಸಿದಂತಾಯ್ತು.

## ಬಾಳಿನಲ್ಲಿ ಸೂರ್ಯ ಉದಯವಾದ

ಸ್ವಲ್ಪ ದಿನಗಳಲ್ಲೇ ಡಾ. ಸಂಪತ್ಕೈಂಗಾರ್ಯರಿಗೆ ಬೆಂಗಳೂರಿನ ಆಯುರ್ವೇದದ ಆಸ್ಪತ್ರೆಗೆ ವರ್ಗವಾದ್ದರಿಂದ ಸಂಸಾರ ಸಮೇತ ಬೆಂಗಳೂರಿಗೇ ಬಂದರು. ವಾದಿರಾಜರು ಅವರ ಜೊತೆಯಲ್ಲೇ ಬಂದರು. ಡಾಕ್ಟರು ಮಲ್ಲೇಶ್ವರದಲ್ಲಿ ತಮ್ಮ ಅತ್ತೆಯವರ ಮನೆಯಲ್ಲೇ ಬಿಡಾರ ಹೂಡಿದರು. ವಾದಿರಾಜರಿಗೆ ಅವರೊಡನೆ ಇರಲು ಸಂಕೋಚವಾಗುತ್ತಿತ್ತು. ಹೀಗೆ ಒಂದು




## ರೇಖಾಚಿತ್ರ

ಸಂಜೆ ತಿರುಗಾಡುತ್ತ ನಗರ್ತಪೇಟೆಯ ಒಂದು ಅಂಗಡಿಯ ಬಳಿ ಹಲವಾರು ಮಂದಿ ಕುಳಿತು ಗಂಧದ ಮರದಲ್ಲಿ ಕೆತ್ತನೆ ಮಾಡುತ್ತಿದ್ದುದನ್ನು ನೋಡಿದರು. ‘‘ನಾನೂ ಗಂಧದ ಮರದ ಕೆತ್ತನೆ ಕಲಿತಿದ್ದೇನೆ. ಮೈಸೂರಿನಲ್ಲಿದ್ದಾಗ ಮಾಡುತ್ತಿದ್ದೆ. ಈಗ ನನ್ನ ಹತ್ತಿರ ಮರ, ಚೀರ್ಣ ಯಾವುದೂ ಇಲ್ಲ’’ ಎಂದರು. ಅಂಗಡಿಯ ಮಾಲೀಕರಾದ ಶ್ರೀಶಂಕರಪ್ಪನವರು ‘‘ಬನ್ನಿ, ಮರ,

ಚೀರ್ಣ ಕೊಡುತ್ತೇನೆ, ಏನಾದರೂ ಮಾಡುವಿರಂತೆ'' ಎಂದು ಕರೆದು ಕೂರಿಸಿ, ಸಾಮಾನುಗಳನ್ನು ಕೊಟ್ಟರು. ಒಂದೆರಡು ಘಂಟೆಗಳಲ್ಲಿ ಒಂದು ಸುಂದರವಾದ ಹಂಸದ ರೇಖಾಚಿತ್ರವನ್ನು ಮಾಡಿಕೊಂಡು ಕೆತ್ತನೆ ಮಾಡಿದರು. ಅದನ್ನು ನೋಡಿದ ಶಂಕರಪ್ಪನವರಿಗೆ ಸಂತೋಷವಾಗಿ ''ಎಷ್ಟು ಚೆನ್ನಾಗಿ ಮಾಡಿದ್ದೀರ ! ನಾಳೆಯಿಂದ ನಮ್ಮಲ್ಲೇ ಕೆಲಸಕ್ಕೆ ಬನ್ನಿ. ದಿನಕ್ಕೆ 50 ರೂಪಾಯಿಗಳನ್ನು ಕೊಡುತ್ತೇನೆಂದರು'' ವಾದಿರಾಜರಿಗೆ ಸ್ವರ್ಗವೇ ಕೈಗೆ ಸಿಕ್ಕಿದಷ್ಟು ಸಂತೋಷವಾಯಿತು. ''ಕೊನೆಗೂ, ನನ್ನ ಬಾಳಿನಲ್ಲಿಯೂ ಸೂರ್ಯ ಉದಯವಾದ'' ಎಂದು ಆ ದಿನಗಳನ್ನು ನೆನೆಯುತ್ತಿದ್ದರು. ಬಯಸಿದ ಬದುಕು ಕೈಗೆ ಸಿಕ್ಕಾಗ ಯಾರಿಗೆ ತಾನೆ ಸಂತೋಷವಾಗುವುದಿಲ್ಲ ?

## ಇಚ್ಛಿಸಿದ ಬದುಕು ಕೈಗೆ ಬಂದಾಗ

ಮುಂದಿನ ದಿನಗಳಲ್ಲಿ ವಾದಿರಾಜರ ಜೀವನವೇ ಬದಲಾಯಿತು. ಪ್ರೀತಿಸಿದ ಶಿಲ್ಪಕಲೆಯೇ ಕಸುಬಾಯಿತು. ಮಲ್ಲೇಶ್ವರದಲ್ಲಿಯೇ ಒಂದು ರೂಮು ಬಾಡಿಗೆಗೆ ಹಿಡಿದರು. ನಗರ್ತ ಪೇಟೆಯಲ್ಲಿ ಕೆಲವು ದಿನಗಳಾದ ಮೇಲೆ ಶಂಕರಪ್ಪನವರು ತಮ್ಮಲ್ಲಿಯೇ ಬಂದು ಇರಲು ಹೇಳಿದರು. ಅದರಂತೆ ಅವರೊಡನೆಯೇ ಇದ್ದರು. ಕಲಾಭಿರುಚಿಯಿದ್ದ ವಾದಿರಾಜರಿಗೆ ಮಾಡಿದ್ದನ್ನೇ ಮತ್ತೆ ಮತ್ತೆ ಮಾಡುವ ಕೆಲಸದಲ್ಲಿ ಆಸಕ್ತಿ ಕಡಿಮೆಯಾಯಿತು. ಹೊಸತನ್ನು ಮಾಡುವ ಬಯಕೆ ಮೂಡುತ್ತಿತ್ತು. ಇದೇ ಸಮಯದಲ್ಲಿ ಬಾಲ್ಯಮಿತ್ರ ನಾರಾಯಣಮೂರ್ತಿ ಬೆಂಗಳೂರಿಗೆ ಬಂದಿದ್ದು, ಅವರ ಜೊತೆ ಮತ್ತೆ ಸೇರಿದರು. ಶಂಕರಪ್ಪನವರ ಅಂಗಡಿ ಬಿಟ್ಟು ಸ್ವತಂತ್ರವಾಗಿ ಕೃತಿಗಳನ್ನು ರಚಿಸುತ್ತಾ ಜೀವನ ನಡೆಸಲು ಪ್ರಾರಂಭಿಸಿದರು. ನಾರಾಯಣಮೂರ್ತಿಯವರ ಮೂಲಕ ಗಾನಸುಧಾಕರ ಶ್ರೀ ಎ. ಸುಬ್ಬರಾಯರ ಪರಿಚಯವಾಯಿತು. ಸುಬ್ಬರಾಯರು ಆವೇಳೆಗೆ ಜನಪ್ರಿಯ ಗಾಯಕರಾಗಿದ್ದರು. ವಾದಿರಾಜರಲ್ಲಿದ್ದ ಕಲಾಶಕ್ತಿ, ಅವರ ಸರಳತೆ ಸುಬ್ಬರಾಯರನ್ನು ಆಕರ್ಷಿಸಿತು. ತಮ್ಮೊಡನೆಯೇ ಬಂದು ಇರಲು ಹೇಳಿದ ಸುಬ್ಬರಾಯರು ''ದೇವರು ಏನು ಕೊಡುತ್ತಾನೋ ಹಂಚಿಕೊಳ್ಳೋಣ'' ಎಂದು ಒತ್ತಾಯಿಸಿ ಕರೆದರು.

ಆಗಿನ್ನೂ ಸುಬ್ಬರಾಯರಿಗೆ ಮದುವೆಯಾಗಿರಲಿಲ್ಲ. ಚಿಕ್ಕಪೇಟೆಯಲ್ಲಿ ಒಂದು ಸಣ್ಣ ರೂಮಿನಲ್ಲಿಯೇ ಇವರ ಜೊತೆಯಿದ್ದಾಗ ವಾದಿರಾಜರ ಅಭಿರುಚಿ ಆಸಕ್ತಿಗಳಿಗೆ ಬಹಳಷ್ಟು ಪ್ರೋತ್ಸಾಹ ಸಿಕ್ಕಿತು. ಒಡಹುಟ್ಟಿದವರಂತೆ ವಾದಿರಾಜರನ್ನು ನೋಡಿಕೊಂಡ ಸುಬ್ಬರಾಯರು, ತಮ್ಮ ಬಿಡುವಿನ ವೇಳೆಯಲ್ಲಿ ಸಾಹಿತ್ಯ, ಕ್ರೀಡೆ, ನೃತ್ಯಗಳ ಪರಿಚಯ ಮಾಡಿಸುವುದು, ಒಳ್ಳೊಳ್ಳೆಯ ಸಿನಿಮಾಗಳಿಗೆ ಕರೆದುಕೊಂಡು ಹೋಗುವುದು, ಹಿರಿಯ ಕಲಾವಿದರ ಪರಿಚಯ ಮಾಡಿಸುವುದು, ಹೀಗೆ ಅವರ ಜೀವನಕ್ಕೆ ಹೊಸ ತಿರುವು ಕೊಟ್ಟರು. "ಏನೇ ಕಷ್ಟ ಬಂದರೂ ಕಲಾವಿದ ಸ್ವಾಭಿಮಾನವನ್ನು ಬಿಡಬಾರದು" ಎಂದು ಹೇಳುತ್ತಿದ್ದ ಸುಬ್ಬರಾಯರನ್ನು ಕಂಡರೆ ವಾದಿರಾಜರಿಗೆ ವಿಶೇಷ ಗೌರವ, ಪ್ರೀತಿ, ಅಭಿಮಾನ ಇವರ ಸ್ನೇಹಕೂಡ ಕೊನೆಯವರೆಗೂ ಹಚ್ಚಹಸುರಾಗಿಯೇ ಉಳಿದಿತ್ತು. ಇವರು ಅವರ ಮನೆಗೆ ಹೋಗಲಿ, ಅವರು ಇವರ ಮನೆಗೆ ಬರಲೀ ಮಾತಿನಲ್ಲಿ ಒಂದು ರಾತ್ರಿ ಕಳೆದು ಮರುದಿನ ಬಂದರೂ, ಸಮಯದ ಪರಿವೆಯೇ ಇರುತ್ತಿರಲಿಲ್ಲ. ಅಷ್ಟು ಮಾತು. ಆ ಮಾತುಗಳಾದರೂ, ಕಲೆ, ಸಾಹಿತ್ಯ, ಸಂಗೀತಗಳಿಗೆ ಸಂಬಂಧಿಸಿದ್ದು, ಬರೀ ನೆನಪುಗಳು ಮಾತ್ರವಲ್ಲ, ರಸಾಸ್ವಾದನೆ ವರ್ಷದಲ್ಲಿ ಒಂದೆರಡು ಬಾರಿಯಾದರೂ ಇಂತಹ ವಿಚಾರ ವಿನಿಮಯಗಳು ಅಹೋರಾತ್ರಿ ನಡೆಯುತ್ತಿದ್ದು ಕಲಾವಿದರನ್ನು ಇನ್ನಷ್ಟು ಹತ್ತಿರ ತರುತ್ತಿತ್ತು.

## ಗುರುದರ್ಶನ

ಸುಬ್ಬರಾಯರಲ್ಲಿದ್ದಾಗ ವಾದಿರಾಜರು ಹೊಸ ರೀತಿಯ ಕೃತಿ ರಚನೆ ಪ್ರಾರಂಭಿಸಿದರು. ತಮಗೆ ಸುಲಭವಾಗಿ ದೊರೆಯುವ ಮಣ್ಣಿನಿಂದ ಕೃತಿ ರಚಿಸುವುದು, ಅದನ್ನು ಪ್ಲಾಸ್ಟರ್ ಆರ್ ಪ್ಯಾರೀಸ್‌ನಿಂದ ಅಚ್ಚು ಮಾಡಿಕೊಂಡು, ಹೆಚ್ಚಿನ ಸಂಖ್ಯೆಯಲ್ಲಿ ಪ್ರತಿಕೃತಿ ಮಾಡಿ, ಬಣ್ಣ ಹಾಕುವುದು, ಹೀಗೆ ಸಿದ್ಧಪಡಿಸಿದ ಕಲಾಕೃತಿಗಳನ್ನು ಸುಬ್ಬರಾಯರ ಮಿತ್ರರಾಗಿದ್ದ ಹಾರ್ಮೋನಿಯಂ ಅರುಣಾಚಲಪ್ಪನವರ ಅಂಗಡಿಯಲ್ಲಿ ಮಾರಾಟಕ್ಕಿಡುವುದು ಹೀಗೆ ತಾವು ಕಲಿತಿದ್ದನ್ನು ಒಂದು ಸಣ್ಣ ಉದ್ಯಮವಾಗಿ ಪ್ರಾರಂಭಿಸಿದರು. ಬಿಡುವಿನ ವೇಳೆಯಲ್ಲಿ ಸುಬ್ಬರಾಯರು ಸಹ ಈ ಕೆಲಸದಲ್ಲಿ ಸಹಾಯ ಮಾಡುತ್ತಿದ್ದರು.

ಅಂಬೆಗಾಲಿಕ್ಕುವ ಗಣೇಶ, ಶಿವ, ಪಾರ್ವತಿ, ಗಾಂಧಿ ಮುಂತಾದ ಕೃತಿಗಳನ್ನು ಮಾಡಿದ್ದರು. ಕೆಲಸಕ್ಕೆ ಬೇಕಾದ ಪ್ಲಾಸ್ಟರ್ ಆಫ್ ಪ್ಯಾರೀಸ್ ತರಲು ಸರ್ಕಾರಿ ಪಿಂಗಾಣಿ ಕಾರ್ಖಾನೆಗೆ ಹೋಗಬೇಕಾಗಿತ್ತು. ಆಗ ಅಲ್ಲಿಯ ಕಲಾವಿಭಾಗದಲ್ಲಿ ಜನರಲ್ ಮ್ಯಾನೇಜರಾಗಿದ್ದ ಶ್ರೀ ಪಿ. ಹರಿಹರ್‌ರವರ ಪರಿಚಯವಾಯಿತು.



ಗಿರಿಜಾ ಕಲ್ಯಾಣ

ಶ್ರೀಹರಿಹರನ್ ಶಾಂತಿ ನಿಕೇತನದಲ್ಲಿ ಕಲಿತು ಬಂದಿದ್ದ ಕಲಾವಿದರು. ನಾವು ಮಾಡುವ ಕೆಲಸದಲ್ಲೆಲ್ಲ ನಮ್ಮ ನಾಡಿನ ಸಂಸ್ಕೃತಿಯನ್ನು ಪ್ರತಿಬಿಂಬಿಸಬೇಕು, ಎಂದು ನಡೆಯುತ್ತಿದ್ದ ಹರಿಹರ್‌ರವರಿಗೆ ವಾದಿರಾಜರ ಪರಿಚಯವಾಗಿ, ಅವರ ಕೆಲಸಗಳನ್ನು ಗಮನಿಸಿದರು. ಕುಶಲತೆಯಿದ್ದರೂ ಸಂಪ್ರದಾಯ ಶೈಲಿಗಳ ಯಾವ ಶಿಲ್ಪವನ್ನೂ ಮಾಡದಿದ್ದಾಗ, ಕ್ರಮೇಣ ಅವುಗಳ ಕಡೆಗ ಗಮನ ಸೆಳೆದರು. ಇದುವರೆಗೂ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ಮಾಡುತ್ತಿದ್ದ ಹಲವಾರು ಕೃತಿಗಳನ್ನು ಪಿಂಗಾಣಿಯಲ್ಲಿ ಮಾಡಿಸಿದರು. ಆಗ ಮಾಡಿಸಿದ ಒಂದು ದೊಡ್ಡ ಬುದ್ಧನ ತಲೆ, ಶಿವ-ಪಾರ್ವತಿ ವಿಗ್ರಹಗಳನ್ನು ಇಂದಿಗೂ ಕೆಲವರ ಮನೆಯಲ್ಲಿ ಕಾಣಬಹುದು. ಕೇವಲ ಜೀವನಕ್ಕಾಗಿ ಏನೋ ಕೃತಿಗಳನ್ನು ರಚಿಸುತ್ತಿರುವ ಕಲಾವಿದನಿಗೆ ತಾವು ಹೇಳುವಂತೆ ಭಾರತೀಯ ಸಂಪ್ರದಾಯ ಕಲೆಗಳ ಕಡೆ ಗಮನ ಹರಿಸಲು ಸಾಧ್ಯವೆ ಎಂಬ ಯೋಚನೆ ಬಂದರೂ, ಸರಿಯಾದ ದಾರಿ ಹಿಡಿದರೆ ಸಮರ್ಥಕಲಾವಿದನಾಗುವ ಎಲ್ಲ ಲಕ್ಷಣಗಳೂ ಇರುವಾಗ, ದಾರಿತೋರಿಸಲೇ ಬೇಕೆಂದು, ಕೆಲವು ಸಂಪ್ರದಾಯ ಶೈಲಿಗಳಲ್ಲಿ ದೊರೆಯುವ ವಿಗ್ರಹಗಳನ್ನು ಮಾಡಲು ಹೇಳಿದರು. ಸಂಪ್ರದಾಯ ಶೈಲಿಗಳ ಮಹತ್ವ, ದೇಶದ ಉದ್ದಗಲಕ್ಕೂ ಹರಡಿರುವ ಅವುಗಳ ಆಕರ್ಷಣೆ, ನಾನಾ ಶೈಲಿಗಳು ಇವುಗಳ ಬಗ್ಗೆ ವಿವರವಾಗಿ ತಿಳಿಸಿದರು. ಶಿಲ್ಪ ಮಾಡಬೇಕೆನ್ನುವ ಬಯಕೆ ಮಾತ್ರ ತೀವ್ರವಾಗಿದ್ದ ವಾದಿರಾಜರಿಗೆ ಹರಿಹರ್‌ರವರ ಮಾತುಗಳು ಬಹಳ ಹಿಡಿಸಿದವು. ಗೊತ್ತು ಗುರಿಯಿಲ್ಲದೆ ನಡೆಯುತ್ತಿದ್ದವರಿಗೆ ಒಂದು ನಿರ್ಧಿಷ್ಟ ಮಾರ್ಗ ಕಂಡಂತಾಯಿತು. ಸಂಪ್ರದಾಯ ಶೈಲಿಗಳು ಹೆಚ್ಚು, ವಾದಿರಾಜರನ್ನೇ ಆಕ್ರಮಿಸಿಕೊಂಡಿತೆಂದರೆ ತಪ್ಪಾಗಲಾರದು. ಅಂದಿನಿಂದ ದೇವಾಲಯಗಳನ್ನು ಸಂದರ್ಶಿಸುವುದು, ಪುಸ್ತಕಗಳನ್ನು ನೋಡುವುದು ಹೀಗೆ ಅಭ್ಯಾಸದ ಕಡೆಗೆ, ತಿಳುವಳಿಕೆಯನ್ನೂ ಬೆಳೆಸಿಕೊಳ್ಳುವ ಕಡೆಗೆ ಗಮನ ಹರಿಸಿದರು.

ಹರಿಹರನ್‌ರವರ ಪರಿಚಯ ಬರೀ ಅಷ್ಟರಲ್ಲೇ ಉಳಿಯಲಿಲ್ಲ. ವಾದಿರಾಜರು ಒಂದು ಬಾಡಿಗೆ ಮನೆ ಹಿಡಿದು, ಪತ್ನಿಯನ್ನು ಕರೆದುತಂದು ಸ್ವತಂತ್ರವಾಗಿ ಸಂಸಾರ ಪ್ರಾರಂಭಿಸಿದ್ದರು. ಹರಿಹರ್‌ರವರ ಪರಿಚಯ ಗಾಢ ಸ್ನೇಹವಾಗಿ ಬೆಳೆದ ಮೇಲೆ, ವಾದಿರಾಜರನ್ನು ತಮ್ಮೊಡನೆಯೇ ಬಂದು

ಇರಲು ಹೇಳಿದರು. ಒಂದೆರಡು ಕಡೆ, ತಾವು ಬಾಡಿಗೆ ತೆಗೆದುಕೊಂಡ ಒಂದು ಭಾಗದಲ್ಲಿ ಇವರ ಸಂಸಾರಕ್ಕೂ ಜಾಗ ಕೊಟ್ಟಿದ್ದರು. ಮುಂದೆ ಮಡಿವಾಳದ ಬಳಿ ಜಾಗ ಕೊಂಡುಕೊಂಡು, ಮನೆಕಟ್ಟಿಕೊಂಡಾಗ, ಇವರಿಗೂ ಪ್ರತ್ಯೇಕ ಬಿಡಾರದ ವ್ಯವಸ್ಥೆ ಮಾಡಿದ್ದರು. ಹರಿಹರ್ರವರ ಮೂಲಕ ಹಲವಾರು ಕಲಾವಿದರ ಪರಿಚಯವೂ ಆಯಿತು. ಖ್ಯಾತ ವ್ಯಂಗ್ಯ ಚಿತ್ರಕಾರ ಶ್ರೀ ಆರ್.ಎಸ್. ನಾಯ್ಡು ಅವರ ಹೆಸರನ್ನು ಕೇಳದವರಿಲ್ಲ. ರೇಖಾ ಚಿತ್ರ ರಚಿಸುವುದರಲ್ಲಿ ಎತ್ತಿದ ಕೈ. ಜೊತೆಗೆ ಬಹಳ ಪ್ರತಿಭಾವಂತ ಸಾಹಿತ್ಯ ಪ್ರಿಯ. ಅವರ ರೀತಿ ಇಂಗ್ಲೀಷ್ ಮಾತನಾಡುವವರೇ ಇಲ್ಲ ಎನ್ನುತ್ತಿದ್ದರು. ಅಂತಹ ಕಲಾವಿದರು ಒಂದೆರಡು ವರ್ಷಗಳು, ಮಡಿವಾಳದಲ್ಲಿದ್ದಾಗ ವಾದಿರಾಜರ ಜೊತೆ ಇದ್ದರು. ನಾಯ್ಡು ಎಷ್ಟೆಲ್ಲಾ ಪ್ರತಿಭಾವಂತರಾದರೂ, ಬಹಳ ವಿಚಿತ್ರ ಸ್ವಭಾವದವರು. ಆದರೆ ವಾದಿರಾಜರ ಜೊತೆಯಲ್ಲಿ ಬಹಳ ಹೊಂದಿಕೊಂಡಿದ್ದರು. ಕಲೆಯ ಬಗ್ಗೆ ಮಾತನಾಡುವುದು, ಹೊಸ ಪ್ರಯೋಗಗಳನ್ನು ಮಾಡುವುದು, ವಾದಿರಾಜರು ಅಭ್ಯಸಿಸುತ್ತಿದ್ದ ಸಂಪ್ರದಾಯ ಶೈಲಿಯನ್ನು ಮೆಚ್ಚುವುದು ಜೊತೆಗೆ ಅವರ ಮನೆಯಲ್ಲಿ ಊಟ ತಿಂಡಿಗಳನ್ನೂ ಮಾಡುತ್ತಿದ್ದರು. ನಾಯ್ಡುರವರನ್ನು ವಾದಿರಾಜರು ಬಹಳ ಮೆಚ್ಚಿಕೊಳ್ಳುತ್ತಿದ್ದರು. ಇವರಿಂದ ಬಿಟ್ಟು ಮೈಸೂರು ಸೇರಿದ ಮೇಲೂ ಆಗಾಗ ಕಾಗದಗಳನ್ನು ಬರೆಯುತ್ತಿದ್ದರು. ಜೊತೆಗೆ ಜಪಾನಿನಿಂದ ಬಂದ ಕಲಾವಿದರನ್ನೂ ಹರಿಹರ್ ಕರೆದು ತಂದು ಪರಿಚಯ ಮಾಡಿಸುತ್ತಿದ್ದರು. ಹೀಗೆ ವಾದಿರಾಜರ ಜೀವನದಲ್ಲಿ ಮತ್ತೊಂದು ಅಧ್ಯಾಯ ಪ್ರಾರಂಭವಾಯಿತೆನ್ನಬಹುದು.

ವಾದಿರಾಜರ ಪತ್ನಿ ನಾಗಮ್ಮನವರು, ಇವರ ಅಲ್ಪಗಳಿಕೆಯಲ್ಲೇ ಅಚ್ಚುಕಟ್ಟಾಗಿ ಸಂಸಾರ ಮಾಡುತ್ತಿದ್ದರು. ಚಿಕ್ಕವಯಸ್ಸಿನಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡ ಪರರ ಆಶ್ರಯದಲ್ಲಿದ್ದ ಆಕೆಗೆ ಕಷ್ಟದ ಜೀವನ ಹೊಸದಾಗಿರಲಿಲ್ಲ. ಬಹಳ ಸಂಕೋಚದ ಸ್ವಭಾವ, ಯಾರೊಡನೆಯೂ ಹೆಚ್ಚು ಬೆರೆಯುತ್ತಿರಲಿಲ್ಲ. ಮನೆಯ ಯಾವ ತೊಂದರೆಯೂ ಇರದಂತೆ ನೋಡಿಕೊಂಡು, ವಾದಿರಾಜರ ಕಲಾರಾಧನೆಯಲ್ಲಿ ನೆರವು ನೀಡುತ್ತಿದ್ದರು.

ಇವರ ಒಬ್ಬನೇ ಮಗ ಸುಬ್ಬಣ್ಣ ಹುಟ್ಟುವ ವೇಳೆಗೆ ವಾದಿರಾಜರಿಗೆ ಸರ್ಕಾರಿ ಹುದ್ದೆ ದೊರೆಯಿತು.

1958ರಲ್ಲಿ ಹರಿಹರ್ರವರ ನಿರ್ದೇಶನದಲ್ಲಿ ಭಾರತ ಸರ್ಕಾರದ ಹಸ್ತ ಕಲಾ ಮಂಡಲಿಯವರು "Regional Design Centres" ಎಂಬ ಶಾಖೆಗಳನ್ನು ಪ್ರಾರಂಭಿಸಿ, ಆಯಾಯ ಪ್ರಾಂತ್ಯಗಳಲ್ಲಿ ಬಳಕೆಯಲ್ಲಿರುವ ಕುಶಲಕಲೆಗಳನ್ನು ಉಳಿಸಿ, ಬೆಳೆಸುವ ಕಾರ್ಯಕ್ರಮಗಳವನ್ನು ಯೋಜಿಸಿದರು. ಹರಿಹರ್ರವರು ಬೆಂಗಳೂರಿನಲ್ಲಿ ಮರದ ಕೆತ್ತನೆಯ ವಿಭಾಗದ ಮುಖ್ಯ ಕೆಲಸಗಾರರನ್ನಾಗಿ ವಾದಿರಾಜರನ್ನು ನೇಮಿಸಿಕೊಂಡರು.

## ಅಧ್ಯಯನ - ಹಲವು ಹತ್ತು ಕಲೆಗಳ ಪರಿಚಯ

ಇಲ್ಲಿಂದ ವಾದಿರಾಜರ ಜೀವನದಲ್ಲಿ ಹೊಸದೊಂದು ಅಧ್ಯಾಯ ಪ್ರಾರಂಭವಾಯಿತು. ಸ್ವತಂತ್ರವಾಗಿ ಕೆಲಸಗಳನ್ನು ಮಾಡಿಕೊಂಡು ಗಳಿಸುತ್ತಿದ್ದವರಿಗೆ ಸರಾಸರಿ ಸಂಬಳ ದೊರೆಯಲು ಪ್ರಾರಂಭವಾಯಿತು. ಪ್ರಿಯವಾದ ಕೆಲಸ, ಕೈತುಂಬ ಸಂಬಳ ಮತ್ತೇನು ಬೇಕು ? "ಮೊದಲ ಬಾರಿಗೆ ಇನ್ನೂರೈವತ್ತು ರೂಪಾಯಿಗಳ ಸಂಬಳ ಬಂದಾಗ, ಇಷ್ಟೊಂದು ಹಣ ಹೇಗೆ ಖರ್ಚು ಮಾಡುವುದು" ಎನ್ನಿಸುತ್ತಿತ್ತು ಎಂದು ಅಂದಿನ ಸಂತೋಷವನ್ನು ನೆನೆಯುತ್ತಿದ್ದರು.

ಡಿಸೈನ್ ಸೆಂಟರಿನಲ್ಲಿ ಬೆಳಿಗ್ಗೆ 10 ಘಂಟೆಯಿಂದ ಸಂಜೆ 6 ಘಂಟೆಯವರೆಗೆ ಕೆಲಸ. ಹಳೆಯ ಕೃತಿಗಳನ್ನು ಪ್ರತಿಕೃತಿ ಮಾಡುವುದು, ಸ್ವಂತ ರಚನೆ, ಎಂದರೆ ಬಳಕೆಗೆ ಬೇಕಾಗುವ ಕುಶಲ ವಸ್ತುಗಳನ್ನು ತಯಾರಿಸುವುದು, ಅದರ ಬಗ್ಗೆ ಅಧ್ಯಯನ, ಅಂದರೆ ಅದು ಯಾವ ಪ್ರಾಂತ್ಯಕ್ಕೆ ಸೇರಿದ್ದು, ಯಾವ ಶೈಲಿಗೆ ಸೇರಿದ್ದು, ಮೂಲಕೃತಿ ಯಾವ ಮಾಧ್ಯಮದಲ್ಲಿದೆ, ಮಾಧ್ಯಮದಿಂದ ಬೇರೆ, ಹೀಗೆ ಮಾಧ್ಯಮಕ್ಕೆ ಮಾಡುವಾಗ ಏನು ಬದಲಾವಣೆ ಮಾಡಿಕೊಳ್ಳಬೇಕು, ಹೀಗೆ ಹಲವು ಹತ್ತು ದಿಕ್ಕುಗಳಲ್ಲಿ ಯೋಚಿಸುವುದು, ಅದಕ್ಕೆ ಅನುಕೂಲವಾಗುವಂತೆ ರೇಖಾಚಿತ್ರವನ್ನು ಮಾಡಿಕೊಳ್ಳುವುದು, ಹೀಗೆ ಒಂದು

ವಿಶೇಷ ಅಧ್ಯಯನವನ್ನೇ ಪ್ರಾರಂಭಿಸಿದರು. ಅಧ್ಯಯನವೆಂದರೆ, ಹೆಚ್ಚು ಹೆಚ್ಚು ಉತ್ಸಾಹವಿತ್ತೇ ವಿನಃ ತಾನು ಸಂಬಳಕ್ಕಾಗಿ ಕೆಲಸ ಮಾಡುತ್ತಿದ್ದೇನೆ ಎಂಬ ಭಾವನೆಯೇ ಇರಲಿಲ್ಲ. ಮರದ ಕೆತ್ತನೆಯ ಜೊತೆಗೆ ಡಿಸೈರ್ ಸೆಂಟರಿನಲಿದ್ದ ಇತರ ಕಲೆಗಳು ಕೂಡ ಇವರನ್ನು ಆಕರ್ಷಿಸಿದವು. ಕಂಚಿನ ಪ್ರತಿಮೆ ಮಾಡುವುದು, ಕಲ್ಲಿನಲ್ಲಿ ಕೃತಿ ರಚಿಸುವುದು, ಷೀಟ್ ಮೆಟಲ್ ವರ್ಕ್, ತಂಜಾವೂರಿನ ಚಿತ್ರಕಲೆ, ಪಿಂಗಾಣಿ ಕಲೆ ಹೀಗೆ, ಇವುಗಳನ್ನು ಕಲಿಯುವುದಕ್ಕಾಗಲೀ ಅವುಗಳ ಬಗ್ಗೆ ತಿಳಿದುಕೊಳ್ಳುವುದಕ್ಕಾಗಲೀ ಮುಕ್ತ ಅವಕಾಶವಿತ್ತು. ಹರಿಹರ್ರವರ ಅಭಿಪ್ರಾಯದಲ್ಲಿ ಕಲಾವಿದ ಎಲ್ಲ ಕ್ಷೇತ್ರಗಳ ಅನುಭವವನ್ನು ಪಡೆಯುವುದರ ಜೊತೆಗೆ, ಸ್ವಲ್ಪ ಕೃಷಿ ಮಾಡಿದರೂ ಒಳ್ಳೆಯದೇ ಅಲ್ಲದೆ, ಅಂತಹ ಆಸಕ್ತರಿಗೆ ಅವಕಾಶ ಇದ್ದೇ ಇತ್ತು. ಹೀಗಾಗಿ ಮೊದಲು ಕೇವಲ ಗಂಧದ ಮರದ ಕೆತ್ತನೆ ಮಾತ್ರ ಕಲಿತಿದ್ದ ಇವರಿಗೆ ದೇಶದ ಹಲವಾರು ಕುಶಲಕಲೆಗಳ ಪರಿಚಯವಾಯಿತು. ಕುಶಲಕಲೆಗಳ ಸಂಪ್ರದಾಯ ಎಂತಹುದು, ಅದರ ಇತಿಹಾಸ, ಅದರಿಂದ ಸಮಾಜಕ್ಕೆ ಆಗುವ ಪ್ರಯೋಜನ, ಹೀಗೆ ಹಲವು ರೀತಿ ಯೋಚಿಸುವುದರ ಜೊತೆಗೆ, ಕಲ್ಲಿನಲ್ಲಿ, ಕಂಚಿನಪ್ರತಿಮೆಗಳನ್ನು ಮೇಣದಲ್ಲಿ ಕೃತಿಗಳನ್ನೂ ರಚಿಸಿದರು. ಇದರಿಂದ ಎಲ್ಲ ಮಾಧ್ಯಮಗಳಲ್ಲೂ ಕೆಲಸ ಮಾಡುವ ಅನುಭವವನ್ನೂ ಗಳಿಸಿಕೊಂಡರು. ಕಲಿಯುವ ಆಸೆ, ಆಸಕ್ತಿಯಿದ್ದರೆ ಎಲ್ಲದರಲ್ಲೂ ಆಕರ್ಷಣೆಯಿರುತ್ತದೆ. ಅಲ್ಲದೆ ಕಲಾವಿದರೆಲ್ಲರೂ ಒಂದು ಕಡೆ ಸೇರಿ ಕೆಲಸ ಮಾಡುವಾಗ, ಒಬ್ಬರಿಂದ ಒಬ್ಬರು ಕಲಿಯುವುದು, ಅನುಭವಗಳನ್ನು ಹಂಚಿಕೊಳ್ಳುವುದು ಇದ್ದೇ ಇರುತ್ತದೆ. ಅದೂ ಒಂದು ರೀತಿಯ ಕಲಿಕೆಯೇ ಇಂತಹ ಅವಕಾಶಗಳನ್ನು ವಾದಿರಾಜರು ಉತ್ಸಾಹಯುತ ವಾಗಿ ಬಳಸಿಕೊಂಡು, ಜ್ಞಾನ ಸಂಪಾದಿಸಿದುದರಲ್ಲಿ ಆಶ್ಚರ್ಯವೇ ಇಲ್ಲ.

ಡಿಸೈರ್ ಸೆಂಟರಿನಲ್ಲಿ ನಡೆಸಿದ ಈ ರೀತಿಯ ಅಧ್ಯಯನ, ಅದರಲ್ಲೂ ಹರಿಹರ್ರಂತಹವರ ನಿರ್ದೇಶನದಲ್ಲಿ, ತಮಗೆ ಹೆಚ್ಚಿನ ಜ್ಞಾನ ತಂದಿತು ಎಂಬುದು ವಾದಿರಾಜರ ಅಭಿಮತ. ನಾಡಿನ ಉದ್ದಗಲಕ್ಕೂ ಇರುವ ಕುಶಲಕಲೆಗಳಲ್ಲಿ ನಸಿಸಿ ಹೋಗುತ್ತಿರುವ, ಜೀವಂತವಾಗಿರುವ ಕಲೆಗಳನ್ನು ಗುರುತಿಸಿ, ಅವುಗಳನ್ನು ಪುನಶ್ಚೇತನಗೊಳಿಸುವುದೇ ಡಿಸೈರ್ ಸೆಂಟರಿನ ಗುರಿ.

ಈ ಕ್ಷೇತ್ರದಲ್ಲಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಅವರಂತೆ ದೇಶದ ಮೂಲೆ ಮೂಲೆಗಳನ್ನು ಸುತ್ತಿ, ಅಪರೂಪದ ಕುಶಲಕಲೆ ಹಾಗೂ ಕಲಾವಿದರನ್ನು ಗುರುತಿಸಿದವರೇ ಇಲ್ಲ. ಅವರಿಗೆ ಏನೇನು ಅನುಕೂಲ ಮಾಡಿಕೊಟ್ಟರೆ ಕಲೆ ಬೆಳೆಯಬಹುದೆಂದು ಅಧ್ಯಯನ ನಡೆಸಿ, ''ಕುಶಲಕಲಾವಿದ ಸಮಾಜದ ಬೆನ್ನೆಲುಬು, ಅವನಿಗೆ ಉನ್ನತ ಸ್ಥಾನ ಕೊಡಬೇಕು'' ಎಂಬುದನ್ನು ತೋರಿಸಿದ್ದಾರೆ ಕಮಲಾದೇವಿಯವರು. ಭಾರತೀಯ ಕಲೆ ಮತ್ತು ಕುಶಲಕಲೆಗಳನ್ನು ದೇಶವಿದೇಶಗಳಲ್ಲಿ ಹರಡಿ ಅದಕ್ಕೆ ಜನಪ್ರಿಯತೆಯನ್ನು ಗಳಿಸಿಕೊಟ್ಟು ಭಾರತೀಯ ಕುಶಲಕಲಾ ನಿಗಮಕ್ಕೆ ಒಂದು ಹೊಸ ಆಯಾಮವನ್ನು ಕೊಟ್ಟವರು. ಕಲೆ, ಕಲಾವಿದರ ಬಗ್ಗೆ ಇಷ್ಟೊಂದು ಅಭಿಮಾನವಿಟ್ಟಿದ್ದ ಶ್ರೀಮತಿ ಕಮಲಾದೇವಿಯವರ ಮುಂದಾಳತ್ವದಲ್ಲಿ ಹರಿಹರ್‌ರಂತಹ ಮೇಧಾವಿಯ ಮಾರ್ಗದರ್ಶನದಲ್ಲಿ ತಮ್ಮ ಕಲಾಭಿರುಚಿಗೆ ಪೋಷಣೆ ದೊರೆತದ್ದು ತಮ್ಮ ಭಾಗ್ಯ ಎನ್ನುತ್ತಿದ್ದರು. ಇಂತಹ ಸುಂದರ ವಾತಾವರಣದಲ್ಲಿ ಸುಮಾರು ಆರು ವರ್ಷಗಳ ಕಾಲ ಅಧ್ಯಯನ ಮಾಡಿದರು. ಅಧ್ಯಯನ ಎಂದರೆ ಕೇವಲ ಗ್ರಂಥಗಳನ್ನು ನೋಡುವುದಾಗಿರಲಿಲ್ಲ. ದೇವಾಲಯಗಳ ಸಂದರ್ಶನ, ಅಲ್ಲಿಯೇ ಕುಳಿತು ರೇಖಾ ಚಿತ್ರವನ್ನು ರಚಿಸುವುದು, ಆ ಪ್ರದೇಶದಲ್ಲಿ ಕೆಲಸ ಮಾಡುತ್ತಿರುವ ಕಲಾವಿದರನ್ನು ಕಂಡು ಸಮಾಲೋಚನೆ ನಡೆಸುವುದು, ವಿಶೇಷವಾದ ಪುರಾತನ ಶಿಲ್ಪಗಳನ್ನು ಪ್ರತಿಕೃತಿ ಮಾಡುವುದು, ಈ ಸಮಯದಲ್ಲಿ ವಾದಿರಾಜರು ಮರದಲ್ಲಿ ರಚಿಸಿದ ಜಾವಾ ಶೈಲಿಯ ''ಪ್ರಜ್ಞಾ ಪಾರಮಿತ'' ಎಂಬ ಬೌದ್ಧಶಿಲ್ಪ, ಅತ್ಯಂತ ಸುಂದರವಾಗಿದ್ದಲ್ಲದೆ, ಹೆಸರನ್ನೂ ತಂದಿತು. ಹೀಗೆ ಬಯಸಿ ಬಯಸಿ ಕಾತರಿಸಿ ಕಲಿಯಬೇಕೆಂದಿದ್ದ ವಿದ್ಯೆಯನ್ನು ಕಲಿಯುವುದು, ಅದರಲ್ಲೇ ಜೀವನ ನಡೆಸುವ ಅವಕಾಶ, ಹರಿಹರ್‌ರಂತಹ ಕಲಾವಿದರ ಒಡನಾಟ, ಎಷ್ಟು ಜನ್ಮಗಳ ಪುಣ್ಯ ಎನ್ನುವಂತಿತ್ತು. ಇಂತಹ ಭಾಗ್ಯ ಎಷ್ಟು ಜನರಿಗೆ ಲಭ್ಯ! ಕತ್ತಲೆಯಲ್ಲಿ ಕೊರಗುತ್ತಿದ್ದವರಿಗೆ ಬಯಸಿದ ಭಾಗ್ಯ ಕೈಗೇ ಸಿಕ್ಕಿ ಜೀವನದಲ್ಲಿ ಸೂರ್ಯ ಎಂದೆಂದೂ ಮಾಸದ ಬೆಳಕನ್ನು ನೀಡಿದ ಎಂದು ಸಂತೋಷಪಡುವಂತಾಯಿತು.

ಡಿಸೈನ್ ಸೆಂಟರಿನಲ್ಲಿ ಕುಶಲಕಲಾವಿದರಿಗೆ ರೇಖಾಚಿತ್ರಗಳನ್ನು ಮಾಡಿಕೊಡುವುದಕ್ಕಾಗಿಯೇ ವಿನ್ಯಾಸಕಾರರಿರುತ್ತಾರೆ. ಎಷ್ಟೋ ಜನ

ಕಲಾವಿದರು ಈ ರೇಖಾ ಚಿತ್ರ ಮಾಡುವ ಅಭ್ಯಾಸವನ್ನೇ ಇಟ್ಟುಕೊಂಡಿರುವುದಿಲ್ಲ. ವಿನ್ಯಾಸ ಕೊಟ್ಟರೆ ಕೆಲಸ ಮಾಡುತ್ತಾರೆ. ಅಂತಹ ಹುದ್ದೆಗೆ ಆರಿಸಿ ಬಂದವರು ಶ್ರೀ ಅಂಬಿಕಾ ಪ್ರಸಾದ್ ದುಬೆ ಎಂಬುವರು. ದುಬೆಯವರು ಉತ್ತರ ಪ್ರದೇಶದಿಂದ ಬಂದ ಕಲಾವಿದರು. ರೇಖಾಚಿತ್ರ ಮಾಡುವುದರಲ್ಲಿ ಸಿದ್ಧ ಹಸ್ತರು. ಚಿತ್ರಕಲೆಯಲ್ಲೂ ಹೆಸರು ಮಾಡಿದ್ದವರು. ದಕ್ಷಿಣ ಭಾರತದ ಕಂಚು ಶಿಲ್ಪಗಳನ್ನು ಬಹಳವಾಗಿ ಮೆಚ್ಚಿಕೊಳ್ಳುತ್ತಿದ್ದ ಅವರು ವಾರಣಾಸಿಯ "ಭಾರತ ಕಲಾಭವನ"ದಲ್ಲಿ ಕೆಲಸದಲ್ಲಿದ್ದರು. ಇಲ್ಲಿಯ ಶಿಲ್ಪ ಸಂಪತ್ತಿಗೆ ಮಾರುಹೋದ ದುಬೆಯವರು ಬದುಕಿದರೆ ದಕ್ಷಿಣ ಭಾರತದಲ್ಲಿ ಬದುಕಬೇಕು ಎಂದು ಆಸೆ ಹೊತ್ತವರು. ಅದರಂತೆ ವಿನ್ಯಾಸಕಾರರ ಹುದ್ದೆ ದೊರೆತಾಗ ಬಹಳ ಸಂತೋಷವಾಗಿ ಬಂದು ಬೆಂಗಳೂರಿನಲ್ಲಿ ನೆಲೆಸಿದರು. ಮೊದಲೇ ಸಂಪ್ರದಾಯ ಶಿಲ್ಪಗಳ ಬಗ್ಗೆ ಆಸಕ್ತಿ ಬೆಳೆಸಿಕೊಂಡು, ಅದನ್ನು ಬಹಳ ಆಳವಾಗಿ ಅಧ್ಯಯನ ನಡೆಸುತ್ತಿದ್ದ ವಾದಿರಾಜರಿಗೆ ದುಬೆಯವರ ಈ ವ್ಯಾಮೋಹ ಬಹಳ ಮೆಚ್ಚುಗೆಯಾಯಿತು. ಜೊತೆಗೆ ಹಳೆಯ ಶಿಲ್ಪಗಳನ್ನು ನೋಡಿದ ಕೂಡಲೇ ಅವು ಯಾವ ಕಾಲಕ್ಕೆ ಸೇರಿದ್ದು ಎಂದು ಗುರುತಿಸುವ ಅವರ ಜ್ಞಾನ ಮತ್ತು ಸದಾ ಶಿಲ್ಪಗಳ ಸೌಂದರ್ಯದ ಗುಂಗಿನಲ್ಲಿಯೇ ಇರುತ್ತಿದ್ದ ಅವರ ಮನಸ್ಸು ಸಹಜವಾಗಿ ವಾದಿರಾಜರನ್ನು ಆಕರ್ಷಿಸಿತು. ಅಲ್ಲದೆ ನೇರ ಬಿಚ್ಚು ಮಾತುಗಳು, ಸ್ವಾಭಿಮಾನ, ಸೌಂದರ್ಯವನ್ನು ಕಂಡರೆ ಮೆಚ್ಚಿ ಮೈ ಮರೆಯುವ ಸರಳತೆ, ಎಲ್ಲರೂ ಇವರಿಗೆ ಪ್ರಿಯವಾಗಿ ಸ್ನೇಹ ಬೆಳೆಸಿದರು. ಇಬ್ಬರೂ ಅಣ್ಣತಮ್ಮಂದಿರಂತೆ ಯಾವಾಗಲೂ ಜೊತೆಯಾಗಿರುತ್ತಿದ್ದರು. ಕೆಲಸ ಮುಗಿದ ಮೇಲೆ ಸಂಜೆಯ ವೇಳೆಗೆ ಒಟ್ಟಿಗೆ ಸಂಗೀತವನ್ನು ಕೇಳುವುದು ಸಿನಿಮಾ ನೋಡುವುದು, ಇಲ್ಲವೇ ಸುತ್ತಾಡುತ್ತಾ ಹರಟುವುದೂ, ಇಬ್ಬರಿಗೂ ಪ್ರಿಯವಾಗಿತ್ತು. ದೇವಾಲಯಗಳ ಅಥವಾ ಶಿಲ್ಪಕ್ಷೇತ್ರಗಳ ಅಧ್ಯಯನಕ್ಕಾಗಿ ಒಟ್ಟಿಗೆ ಹೋಗುವ ಸಂದರ್ಭಗಳು ಬಂದರಂತೂ ಇಬ್ಬರಿಗೂ ಬಹಳ ಖುಷಿ. ಅಲ್ಲಿ ಹೋಗಿ ವಿಶೇಷ ಶಿಲ್ಪಗಳ ರೇಖಾ ಚಿತ್ರ ತಯಾರಿಸುವ ಕೆಲಸವಿರುತ್ತಿತ್ತು. ಇಬ್ಬರೂ ಸಮಾನ ಅನುಭವವುಳ್ಳವರು. "ನಿಂತಲ್ಲೇ, ಎಷ್ಟೇ ಎತ್ತರವಿರಲಿ, ಶಿಲ್ಪವನ್ನು ನೋಡಿ ಸೀದಾ ಪೆನ್ನು

ತೆಗೆದುಕೊಂಡು ರೇಖಾ ಚಿತ್ರವನ್ನು ಬಿಡಿಸುತ್ತಿದ್ದರು. ಅಷ್ಟು ಖಚಿತ ರೇಖೆಗಳನ್ನು ಎಳೆಯುತ್ತಿದ್ದರು. ದುಬೆಯವರ ರೇಖೆಗಳೆಂದರೆ ದೃಢ ಹಾಗೂ ಖಚಿತ'' ಎಂದು ದುಬೆಯವರನ್ನು ವಾದಿರಾಜರು ಮೆಚ್ಚಿಕೊಳ್ಳುತ್ತಿದ್ದರು. ''ವಾದಿರಾಜರು ಮಾಡುವ ಶಿಲ್ಪದ ಕಿರುಬೆರಳು ಕೂಡ ಸುಂದರವಾಗಿರುತ್ತದೆ'' ಎಂದು ದುಬೆಯವರ ಮೆಚ್ಚುಗೆ. ಅಲ್ಲಿಯೇ ಶ್ರೀ ಅಪ್ಪುಕುಟ್ಟನ್ ಆಚಾರ್ ಹಾಗೂ ಶ್ರೀ



ಸೈನಿಕ

ಪರಮೇಶ್ವರಾಚಾರ್ ಎಂಬ ಶಿಲ್ಪಿಗಳ ಪರಿಚಯ ಕೂಡ ಆಯಿತು. ಒಟ್ಟಿನಲ್ಲಿ ಡಿಸೈನ್ ಸೆಂಟರಿನಲ್ಲಿ ಒಂದು ಒಳ್ಳೆಯ, ಸುಂದರ ವಾತಾವರಣವಿತ್ತು. ಕಾಲ ಸರಿಯುವುದಲ್ಲವೆ? ಹರಿಹರ್‌ರವರ ನಂತರ ಡಿಸೈನ್ ಸೆಂಟರಿನ ನಿರ್ದೇಶಕರಾಗಿ ಬಂದವರು ಶ್ರೀ ಅಸಿತ್‌ಕುಮಾರ್ ಹಲ್ದಾರರು.

ಅಸಿತ್‌ಕುಮಾರ್ ಹಲ್ದಾರರು ಬಂಗಾಳದವರು. ಅವನೀಂದ್ರನಾಥ ಟಾಗೂರರ ಶಿಷ್ಯರು. ಕನ್ನಡನಾಡಿನ ಖ್ಯಾತ ಚಿತ್ರಶಿಲ್ಪಿ ಕೆ. ವೆಂಕಟಪ್ಪನವರ ಸಹಪಾಠಿಗಳು. ವಾದಿರಾಜರಿಗೆ ವೆಂಕಟಪ್ಪನವರ ಪರಿಚಯ ಮೊದಲೇ ಆಗಿತ್ತು. ಸುಬ್ಬರಾಯರ ಜೊತೆಯಲ್ಲಿದ್ದಾಗ ತಗಡೂರು ಮೂಗಯ್ಯ ಎಂಬ ಖ್ಯಾತ ಮೃದಂಗ ವಿದ್ವಾಂಸರು ಇವರನ್ನು ವೆಂಕಟಪ್ಪನವರನ್ನು ಪರಿಚಯಿಸಲು ಕರೆದುಕೊಂಡು ಹೋಗಿದ್ದರು.

ಅಸಿತ್‌ಕುಮಾರ್ ಹಲ್ದಾರರು ಬೆಂಗಳೂರಿಗೆ ಬಂದು ಹುದ್ದೆ ಸ್ವೀಕರಿಸಿದ ಮೇಲೆ ಅವರನ್ನು ಕಾಣಲು ಚಿತ್ರಶಿಲ್ಪಿ ಕೆ. ವೆಂಕಟಪ್ಪ ಅವರು ಬಂದರು. ಡಿಸೈನ್ ಸೆಂಟರಿನ ಮರದ ಕೆತ್ತನೆಯ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದ ವಾದಿರಾಜರನ್ನು ಕಂಡು ಅವರಿಗೆ ಬಹಳ ಸಂತೋಷವಾಯಿತು. "ಒಳ್ಳೆಯ ಕೆಲಸ ಸಿಕ್ಕಿದೆ, ಚೆನ್ನಾಗಿ ಅಭಿವೃದ್ಧಿ ಹೊಂದು" ಎಂದು ಆಶೀರ್ವದಿಸಿದರು.

ಅಸಿತ್‌ಕುಮಾರ್ ಹಲ್ದಾರರು ಸ್ವತಃ ಕಲಾವಿದರಾದ್ದರಿಂದ ಎಲ್ಲ ಕಲಾವಿದರಿಗೂ ಬಹಳ ಗೌರವ ಕೊಡುತ್ತಿದ್ದರು. ಕಲೆಯ ಅಧ್ಯಯನ, ಹೊಸತನ್ನು ಕಲಿಯುವ ಬಯಕೆ, ಯಾವುದಕ್ಕಾದರೂ ಬಹಳ ಪ್ರೋತ್ಸಾಹ ಕೊಡುತ್ತಿದ್ದರು. ಅವರ ನಂತರ ಬಂದವರಲ್ಲಿ ಶ್ರೀ ಬದರಿ ಎಂಬುವರು, ಮುಖ್ಯವಾಗಿ ವಾದಿರಾಜರಿಗೆ ಒಂದು ರೀತಿ ಕಿರುಕುಳ ಕೊಟ್ಟವರು ಎಂದು ಹೇಳಬಹುದು. ಬದರೀ ಕಲಾವಿದರಾಗಿರಲಿಲ್ಲ. ಇವರ ಕಾಲದಲ್ಲಿ ವಾದಿರಾಜರಿಗೆ ಸರ್ಕಾರೀ ಕಾರ್ಯಾಲಯಗಳ ರಾಜಕೀಯ ಪರಿಚಯವಾಯಿತು. ಇವರ ಕೈಕೆಳಗೆ ಕೆಲಸ ಮಾಡಲು ಪ್ರಾರಂಭಿಸಿದ ಕೆಲವೇ ದಿನಗಳಲ್ಲಿ ಕೆಲಸವನ್ನೇ ಬಿಡುವ ಯೋಚನೆ ಪ್ರಾರಂಭವಾಯಿತು. ತಾವು ಮಾಡುವ ಕೆಲಸಕ್ಕೆ ತಾವೇ ರೇಖಾಚಿತ್ರ ತಯಾರಿಸಿಕೊಳ್ಳುವ ವಾದಿರಾಜರ ಪ್ರವೃತ್ತಿ, ನಿರ್ಧಾರಗಳಿಂದ

ಪ್ರಾರಂಭವಾದ ಮನಸ್ತಾಪ ಬೆಳೆಯುತ್ತಲೇ ಹೋಯಿತು. ಕಲಾವಿದನಿಗೆ ಕೆಲಸ ಮಾಡುವುದರಲ್ಲಿಯೇ ಸ್ವಾತಂತ್ರ್ಯವಿಲ್ಲದ ಮೇಲೆ ಮನಸ್ಸಿಗೆ ನೆಮ್ಮದಿ ಎಲ್ಲಿರುತ್ತದೆ? ಕೊನೆಗೂ ಸರ್ಕಾರೀ ಉದ್ಯೋಗಕ್ಕೆ ರಾಜೀನಾಮೆ ಇತ್ತರು.

ಉದ್ಯೋಗಕ್ಕೆ ತಿಲಾಂಜಲಿಯಿತ್ತು, ಸ್ವತಂತ್ರವಾಗಿ ಕೆಲಸ ಮಾಡಿ ಬದುಕಲು ತೀರ್ಮಾನಿಸಿ, ಡಿಸೈರ್ ಸೆಂಟರಿನಿಂದ ಹೊರ ಬಂದಾಗ ಹಲವರು ಹೆದರಿಸಿದರು. ಉದ್ಯೋಗ ಬಿಟ್ಟು ತಿನ್ನುವುದೇನು ಎಂದು ದೂಷಿಸಿ 'ಮನೆಯಲ್ಲಿ ಮಣ್ಣು ತಿನ್ನಬೇಕು' ಎಂದು ಹಾಸ್ಯ ಮಾಡಿದವರು ಕೆಲವರು. ಆದರೆ ಎಲ್ಲರ ಪ್ರತಿಕ್ರಿಯೆಗಳಿಗೆ ವಿರುದ್ಧವಾಗಿತ್ತು. ಹರಿಹರ್ಕರವರ ಅಭಿಪ್ರಾಯ.

''ಯಾರಿಗಿದೇರಿ ನಿಮಗಿರುವಷ್ಟು ಧೈರ್ಯ ? ಸರ್ಕಾರೀ ಕೆಲಸದಿಂದಲೇ ಬದುಕಬೇಕಾ ? ಕೈಯಲ್ಲಿ ಕೆಲಸವಿದ್ದರೆ ಎಲ್ಲಿಯಾದರೂ ಜೀವಿಸಬಹುದು. ಬೇರೆಯವರ ಮಾತನ್ನು ಕಿವಿಗೆ ಹಾಕಿಕೊಳ್ಳಲೇ ಬೇಡಿ, ಒಳ್ಳೆಯ ಕೆಲಸ ಮಾಡಿದಿರಿ'' ಎಂದು ಬೆನ್ನು ತಟ್ಟಿದರು. ಎಷ್ಟಾದರೂ ಹರಿಹರ್ಕರವರ ಮಾತು ವಾದಿರಾಜರಿಗೆ ವೇದ ವಾಕ್ಯವಲ್ಲವೆ ?

## ಸ್ವತಂತ್ರ ಬದುಕಿಗೆ ನಾಂದಿ

1961ರಲ್ಲಿ ಕೆಲಸ ಬಿಟ್ಟೊಡನೆ ಮೊದಲು ಬಂದ ಕೆಲಸ ಕಲ್ಕತ್ತದ ಮಾ ಆನಂದಮಯಿ ಆಶ್ರಮಕ್ಕೆ ಗಂಧದ ಮಂಟಪ ಮಾಡಲು ಅವಕಾಶ. ಅಲಂಕಾರ ಪೂರ್ಣವಾದ ಈ ಮಂಟಪ ಒಳ್ಳೆಯ ಹೆಸರನ್ನೂ ತಂದಿತ್ತು. ಇಂದಿಗೂ ಕಲ್ಕತ್ತಾದ 'ಮಾ ಆನಂದಮಯಿ ಘಾಟ್' ಪೂಜಾಗೃಹದಲ್ಲಿದೆ. ಮುಂದೇನು ಎಂದು ಯೋಚಿಸುವ ಮೊದಲೇ ಸರ್ ಎಂ. ವಿಶ್ವೇಶ್ವರಯ್ಯನವರ ಕಲ್ಲಿನ ಪ್ರತಿಮೆ ಮಾಡಲು ಅವಕಾಶ ಸಿಕ್ಕಿತು. ಬೆಂಗಳೂರಿನ ಸರ್ ಎಂ. ವಿಶ್ವೇಶ್ವರಯ್ಯ ಇಂಡಸ್ಟ್ರಿಯಲ್ ಮತ್ತು ಟೆಕ್ನಲಾಜಿಕಲ್ ಮ್ಯೂಸಿಯಂನ ಪ್ರವೇಶ ದ್ವಾರದಲ್ಲಿಯೇ ಸ್ಥಾಪಿತವಾಗಿರುವ ಈ ಕಲಾಕೃತಿ ಜೀವಕಳೆಯಿಂದ ಕೂಡಿದ್ದು ಇಂದಿಗೂ ಆಕರ್ಷಣೀಯವಾಗಿದೆ.

ಹೀಗೆ ಸ್ವತಂತ್ರವಾಗಿ ಕೆಲಸ ಮಾಡಿಕೊಂಡು ಬದುಕಲು ವಾದಿರಾಜರಿಗೆ ಅವಕಾಶಗಳು ದೊರೆಯುತ್ತಾ ಬಿಡುವೇ ಇಲ್ಲದಷ್ಟು ಕೆಲಸಗಳು ಬಂದವು. ಕಷ್ಟಜೀವನದ ಅಭ್ಯಾಸ ಮೊದಲಿನಿಂದಲೂ ಇದ್ದುದರಿಂದ ಈ ಹೊಸ ಹೆಜ್ಜೆ

ಯಾವ ತೊಡರನ್ನೂ ತರಲಿಲ್ಲ. ಮನೆಯಲ್ಲಿ ಶ್ರೀಮತಿಯವರಿಗೆ ಮಾತ್ರ ನಿರಾಸೆಯಾದರೂ, ಯಾವುದನ್ನೂ ತೋರಿಸಿಕೊಳ್ಳದೆ ಎಂದಿನಂತೆ ಸಹಕರಿಸುತ್ತಿದ್ದರು. ಮಗು ಸುಬ್ಬಣ್ಣ ಕಂಟೋನ್ಮೆಂಟಿನ ಶಾಲೆಯಲ್ಲಿ ಓದುತ್ತಿದ್ದ. ಬಿಡುವಿನ ವೇಳೆಯಲ್ಲಿ ತಂದೆಯ ಜೊತೆಯಲ್ಲೇ ಕಾಲಕಳೆಯುತ್ತ, ಅವರ ಕೆಲಸಗಳನ್ನು ಗಮನಿಸುತ್ತಿದ್ದ.



ರಾಷ್ಟ್ರಪತಿಗಳಾಗಿದ್ದ ಶ್ರೀ ಎಸ್. ರಾಧಾಕೃಷ್ಣನ್ ಅವರಿಂದ ರಾಷ್ಟ್ರಪ್ರಶಸ್ತಿ ಸ್ವೀಕರಿಸುತ್ತಿರುವುದು.

## ರಾಷ್ಟ್ರಪ್ರಶಸ್ತಿ

1965ನೇ ಇಸವಿಯಲ್ಲಿ ಭಾರತ ಹಸ್ತಕಲಾ ಮಂಡಲಿಯವರು ಉತ್ತಮ ಕುಶಲಕಲಾವಿದರಿಗೆ ರಾಷ್ಟ್ರಪ್ರಶಸ್ತಿಯನ್ನು ಕೊಡುವ ಯೋಜನೆಯನ್ನು ಹಮ್ಮಿಕೊಂಡರು. ದೇಶದಾದ್ಯಂತ ಇರುವ ಎಲ್ಲ ಕುಶಲ ಕಲೆಗಳಲ್ಲೂ ಉತ್ತಮ ಕೆಲಸ ಮಾಡುವ ಕಲಾವಿದರನ್ನು ಗುರುತಿಸಿ, ಗೌರವಿಸಿದರೆ ಅವರ ಸ್ಥಾನ ಮಾನಗಳು ಹೆಚ್ಚುವುದಲ್ಲದೆ, ಕುಶಲಕಲೆಯ ಬೆಳವಣಿಗೆಗೂ ಪ್ರೋತ್ಸಾಹ ಕೊಟ್ಟಂತಾಗುತ್ತದೆ ಎಂಬ ಉದ್ದೇಶದಿಂದ ಈ ಪ್ರಶಸ್ತಿ ಯೋಜನೆ ಪ್ರಾರಂಭವಾಯಿತು. ಹಸ್ತಕಲಾ ಮಂಡಲಿಯ ಅಧ್ಯಕ್ಷಿಣಿಯಾಗಿದ್ದ ಶ್ರೀಮತಿ ಕಮಲಾದೇವಿಯವರದೇ ಈ ಯೋಜನೆ. ರಾಷ್ಟ್ರಾದ್ಯಂತ ಆಯ್ಕೆಯಾದ ಹದಿನಾರು ಕುಶಲಕಲಾವಿದರಲ್ಲಿ ಕರ್ನಾಟಕದಿಂದ ಮರದ ಕೆತ್ತನೆಯ ವಿಭಾಗಕ್ಕೆ ಶ್ರೀವಾದಿರಾಜ್ ಮತ್ತು ಶ್ರೀ ಪರಮೇಶ್ವರಾಚಾರ್ಯರೂ, ದಂತದ ಕೆತ್ತನೆಗೆ ಶ್ರೀ ಅಪ್ಪುಕುಟ್ಟಿ ಆಯ್ಕೆಯಾಗಿದ್ದರು.

ವಾದಿರಾಜರಿಗೆ ರಾಷ್ಟ್ರಪ್ರಶಸ್ತಿ ಬಂದದ್ದು ನಮ್ಮ ಮನೆಯಲ್ಲಿ ನಮಗೇ ಸಂತೋಷ ತಂದಿತ್ತು. ಆ ವೇಳೆಗಾಗಲೇ ನನ್ನ ಬಿ.ಎಸ್.ಸಿ. ಮುಗಿದು, ಕಲಾಮಂದಿರದಲ್ಲಿ ಚಿತ್ರಕಲಾಭ್ಯಾಸವನ್ನು ಮಾಡುತ್ತಿದ್ದೆ. 1964ರಿಂದ ವಾದಿರಾಜರಲ್ಲಿ ಜೇಡಿಮಣ್ಣಿನಲ್ಲಿ ಕೆಲಸ ಮಾಡುವುದನ್ನು ಕಲಿಯುತ್ತಿದ್ದೆ. ಸರಸ್ವತೀ ವಿದ್ಯಾಮಂದಿರದಲ್ಲಿ ಶಿಕ್ಷಕಿಯಾಗಿ, ಮಧ್ಯಾಹ್ನದ ವೇಳೆಯಲ್ಲಿ ಶಿಲ್ಪಕಲೆ ಕಲಿಯಲು ಅವಕಾಶ ಮಾಡಿಕೊಂಡಿದ್ದೆ. ರಾಷ್ಟ್ರಪ್ರಶಸ್ತಿ ದೊರೆತಾಗ ವಾದಿರಾಜರು ದುಬೆಯವರ ಜೊತೆಯಲ್ಲಿ ಡಬ್ಬಲ್‌ರೋಡಿನ ಬಳಿ ಶಾಂತಿ ರಸ್ತೆಯಲ್ಲಿ ವಾಸವಾಗಿದ್ದರು. ಪ್ರಶಸ್ತಿ ಪಡೆದ ಕಲಾವಿದರ ಕೈಕೆಳಗೆ ಯುವ ಜನಾಂಗಕ್ಕೂ ತರಬೇತಿ ನೀಡುವ ಯೋಜನೆಯನ್ನೂ ಹಸ್ತಕಲಾ ಮಂಡಲಿಯವರು ಪ್ರಾರಂಭಿಸಿದರು. ವಾದಿರಾಜರಿಗೂ ನಾಲ್ಕುಮಂದಿ ಶಿಷ್ಯರನ್ನು ತೆಗೆದುಕೊಳ್ಳುವ ಅವಕಾಶಸಿಕ್ಕಿತು. ನಾಲ್ಕು ಮಂದಿಗೆ ಕಲಿಸಲು ಮನೆಯಲ್ಲಿ ಸ್ಥಳಾವಕಾಶ ಇರದಿದ್ದರಿಂದ, ಹಸ್ತಕಲಾ ಮಂಡಲಿಯ ಸೆಂಟರಿನಲ್ಲೇ ತರಬೇತಿ ನಡೆಸಲು ತೀರ್ಮಾನಿಸಿದರು. ವಿಕ್ಟೋರಿಯಾ ರಸ್ತೆಯಲ್ಲಿದ್ದ ಕೇಂದ್ರದಲ್ಲಿಯೇ

ಈ ತರಬೇತಿ ಯೋಜನೆ ಪ್ರಾರಂಭವಾಯಿತು. ಆ ಕೇಂದ್ರದಲ್ಲೇ ಕಂಚು ಶಿಲ್ಪ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದ ಶ್ರೀಭಾಷ್ಯಂ ಸ್ಥಪತಿಯವರು ಕೂಡ ರಾಷ್ಟ್ರಪ್ರಶಸ್ತಿ ಪಡೆದಿದ್ದು, ಅವರ ಕೈಕೆಳಗೂ ಈ ತರಬೇತಿ ಯೋಜನೆ ಪ್ರಾರಂಭವಾಗಿತ್ತು. ಈ ತರಬೇತಿಯ ಅವಧಿ ಮೂರು ವರ್ಷಗಳು. ವಾದಿರಾಜರು ಅಲ್ಲಿಗೇ ಬಂದು ಹೇಳಿಕೊಡಬೇಕಾಗಿತ್ತು. ಅವರಿಗೂ ಗೌರವಧನ ಮತ್ತು ಕಲಿಯುವ ವಿದ್ಯಾರ್ಥಿಗಳಿಗೇ ಸ್ಟೈಪೆಂಡ್ ದೊರೆಯುತ್ತಿತ್ತು. ಬಿ. ಶ್ಯಾಮಾಚಾರ್, ರಂಗಸ್ವಾಮಿರಾಜು, ಜಗಜ್ಯೋತಿ ಎಂಬ ಮೂರು ವಿದ್ಯಾರ್ಥಿಗಳ ಜೊತೆಗೆ ನನ್ನನ್ನೂ ಆಯ್ಕೆ ಮಾಡಿದರು. ನನಗಂತೂ ದಿನಪೂರ್ತಿ ಕುಳಿತು ಕಲಿಯುವ ಈ ಅವಕಾಶ ಸಿಕ್ಕಿದ್ದು ಬಹಳ ಸಂತೋಷ ತಂದಿತ್ತು.

ನಾನು ಬಸವನಗುಡಿಯಲ್ಲಿ ವಾಸವಾಗಿದ್ದೆ. ವಾದಿರಾಜರು, ಶ್ಯಾಮಾಚಾರ್ಯರೂ ಡಬ್ಬಲ್ ರೋಡಿನ ಬಳಿ ವಾಸವಾಗಿದ್ದರು. ಬಸವನಗುಡಿಯಿಂದ ವಿಕ್ಟೋರಿಯಾ ರಸ್ತೆಗೆ ಹೋಗಬೇಕಾದರೆ ಎರಡು ಬಸ್ಸುಗಳನ್ನು ಬದಲಾಯಿಸಬೇಕಿತ್ತು. ಡಬ್ಬಲ್‌ರೋಡಿನವರೆಗೆ ಹೋಗಿ, ಅಲ್ಲಿಂದ ಅವರಿಬ್ಬರ ಜೊತೆಯಲ್ಲಿ ಮತ್ತೊಂದು ಬಸ್ಸು ಹಿಡಿಯುತ್ತಿದ್ದೆ. ಆ ಬಸ್ಸು ಬರುವಾಗಲೇ ತುಂಬಿಕೊಂಡೇ ಬರುತ್ತಿತ್ತು. ನಿಲ್ಲಿಸುವುದೇ ಕಷ್ಟವಾಗುತ್ತಿತ್ತು. ಹೀಗಾಗಿ ಮೂವರೂ ನಡೆದೇ ಹೋಗಬೇಕಾಗಿತ್ತು. ಡಬ್ಬಲ್‌ರೋಡಿನಿಂದ ಜಾನ್ ಮಾರ್ಕೆಟ್‌ವರೆಗಿನ ರಸ್ತೆ ಶಾಂತವಾಗಿರುತ್ತಿತ್ತು. ಅಷ್ಟು ದೂರ ನಡೆಯುತ್ತಿದ್ದಾಗ ವಾದಿರಾಜರು ಏನಾದರೂ ಮಾತನಾಡುತ್ತಲೇ ಇರುತ್ತಿದ್ದರು. ನಮಗೂ ಕೇಳಲು ಉತ್ಸಾಹವಿರುತ್ತಿತ್ತು. ಅವರ ಜೀವನದ ಬಗ್ಗೆಯೇ ಕೇಳಿದಾಗ ತಮ್ಮ ಬಾಲ್ಯ, ವಿದ್ಯೆ, ಕಲಿತದ್ದು, ಹರಿಹರ್ಕರವರ ಪರಿಚಯವಾದದ್ದು ಮುಂತಾದ ಎಲ್ಲ ವಿವರಗಳನ್ನೂ ಹೇಳಿದಾಗ ಸಂಗ್ರಹಿಸಿ, ಬರೆದಿಡುತ್ತಿದ್ದೆ. ವೈವಿಧ್ಯಮಯವಾದ ಆ ವಿಷಯಗಳನ್ನು ಕೇಳಿದಾಗ ಇದು ಬರೆದು ಇಡಲೇಬೇಕೆಂದು ಮನಸ್ಸು ಬಂದಿತ್ತು. ನನಗೆ ಸ್ವಲ್ಪ ಸಾಹಿತ್ಯದಲ್ಲೂ ಅಭಿರುಚಿಯಿದ್ದುದರಿಂದ ಬರೆಯುವ ಅಭ್ಯಾಸವೂ ಇತ್ತು. ಮುಂದೆ ಪುಸ್ತಕ ರೂಪದಲ್ಲೇ, ಅವರೇ ಬರೆದಂತೆ ಯಾಕೆ ಬರೆಯಬಾರದೆಂದೂ ಯೋಚಿಸಿ ಸಂಗ್ರಹಿಸಿದ ವಿಷಯಗಳೇ ಇಂದು ಈ ರೀತಿ ನಿಮ್ಮ ಮುಂದಿದೆ.

ವಾದಿರಾಜರು ಬಹಳ ಚೆನ್ನಾಗಿ ಮಾತುಗಳನ್ನು ಆಡುತ್ತಿದ್ದರು. ಯಾವ ವಿಷಯವನ್ನೇ ಆಗಲಿ ಮನಮುಟ್ಟುವಂತೆ ವರ್ಣಿಸುತ್ತಿದ್ದರು. ಕಲೆಗೆ ಸಂಬಂಧಪಟ್ಟುದಾದರೆ ಕಣ್ಣ ಮುಂದೆ ಚಿತ್ರ ನಿಂತಂತಿರುತ್ತಿತ್ತು. ಅಡಿಗೆಗೆ ಸಂಬಂಧಪಟ್ಟುದಾದರೆ ಬಾಯಲ್ಲಿ ನೀರುತರಿಸುವಂತಿರುತ್ತಿತ್ತು. ಹಾಸ್ಯ ಪ್ರಸಂಗಗಳನ್ನಂತೂ ಎಷ್ಟು ಬಾರಿ ಹೇಳಿದರೂ, ಪ್ರತಿಬಾರಿಯೂ ಹೊಸತೇನೋ ಎನ್ನುವಂತೆ ವರ್ಣಿಸುತ್ತಿದ್ದರು. ಸಂಜೆಯಾದರೆ ನಮ್ಮ ಮನೆಯಲ್ಲಿ ನಾವೆಲ್ಲರೂ ಸೇರಿ ಅವರ ಮಾತುಗಳನ್ನೇ ಕೇಳುತ್ತಿದ್ದೆವು. ನನ್ನ ಅಕ್ಕ, ತಂಗಿ, ತಮ್ಮಂದಿರಿಗೆ ಅವರ ಮಾತುಗಳನ್ನು ಕೇಳಿ ಕೇಳಿ ಮೆಲಕು ಹಾಕುವುದೇ ಆಗುತ್ತಿತ್ತು. ಹಾಸ್ಯ ಪ್ರಸಂಗಗಳನ್ನಂತೂ ಮತ್ತೆ ಮತ್ತೆ ಕೇಳಿ ಆನಂದಿಸುತ್ತಿದ್ದೆವು. ಯಾವ ವಿಷಯವನ್ನೇ ತೆಗೆದುಕೊಂಡರೂ, ನಿಧಾನವಾಗಿ ತಮ್ಮ ಅಪಾರ ಅನುಭವ ಬೆರೆಸಿ, ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಿದ್ದರು. ಹೀಗಾಗಿ ಆ ದೂರದ ರಸ್ತೆ ಸವೆಯುವುದೇ ತಿಳಿಯುತ್ತಿರಲಿಲ್ಲ. ಬಸ್ಸಿಗೆ ಕಾಯುವುದಕ್ಕಿಂತ ನಡೆಯುವುದರಲ್ಲೇ ಆನಂದವಿರುತ್ತಿತ್ತು. ಕೆಲವೊಮ್ಮೆ ಬೇಗನೆ ಹೊರಟು ಆಲ್ಬರ್ಟ್ ರಸ್ತೆಯಲ್ಲಿದ್ದ ಹರಿಹರ್ರವರ ಮನೆಗೂ ಹೋಗುತ್ತಿದ್ದೆವು.

## ಮೊದಲ ದೊಡ್ಡ ಹೊಯ್ಸಳ ವಿಷ್ಣು

ನಮ್ಮ ತರಬೇತಿ ಪ್ರಾರಂಭವಾದ ವೇಳೆಯಲ್ಲಿ ವಾದಿರಾಜರಿಗೆ ಅಂತಹ ಹೇಳಿಕೊಳ್ಳುವಂತಹ ಯಾವ ಕೆಲಸಗಳೂ ಇರಲಿಲ್ಲ. ಜಪಾನಿನ ಕಾನ್ಸ್‌ಲೇಟ್ ಜನರಲ್ ಅವರಿಗಾಗಿ ಒಂದು ಶಿವ, ಪಾರ್ವತಿ ವಿಗ್ರಹಗಳನ್ನು ಚೋಳ ಶೈಲಿಯಲ್ಲಿ ಶ್ರೀಗಂಧದ ಮರದಲ್ಲಿ ಮಾಡುತ್ತಿದ್ದರು. ಹನ್ನೊಂದು ಇಂಚಿನ ಎತ್ತರದ ಶಿವ, ಒಂಬತ್ತು ಇಂಚು ಎತ್ತರದ ಪಾರ್ವತಿ, ಬಹಳ ಸುಂದರವಾಗಿತ್ತು, ಆದರೆ ಅದರ ಛಾಯಾ ಚಿತ್ರವಾಗಲೀ, ರೇಖಾಚಿತ್ರವಾಗಲೀ ಸಂಗ್ರಹಿಸಿಡಲು ನನಗೆ ಸಿಗಲಿಲ್ಲ. ವಿಗ್ರಹಗಳನ್ನು ಮಾತ್ರ ನೋಡಿದ್ದೆ. ನಮ್ಮ ತರಬೇತಿ ಹೊಸದಾಗಿ ಪ್ರಾರಂಭವಾಗಿದ್ದುದರಿಂದ ಹೆಚ್ಚಿನ ವೇಳೆ ಅಲ್ಲಿಯೇ ಕಳೆಯುತ್ತಿದ್ದರು. ಅದೇ ಸಮಯದಲ್ಲಿ ದುಬೆಯುವರ ಮುಖಾಂತರ ಕಲ್ಕತ್ತಾದ ನವಲ್‌ಕಿಶೋರ್ ಕೆಜ್ರಿವಾಲ್ ಎಂಬುವರ ಪರಿಚಯ ವಾದಿರಾಜರಿಗೆ ಆಯಿತು. ಬಿರ್ಲಾರವರು

ಕಲ್ಕತ್ತಾದಲ್ಲಿ ಕಟ್ಟಿಸುತ್ತಿದ್ದ ನರ್ಸಿಂಗ್ ಹೋಂ ಒಂದರಲ್ಲಿ ಪೂಜಾ ಮಂದಿರದ ನಿರ್ಮಾಣ ಹಾಗೂ ಪೂಜಾ ಮೂರ್ತಿ ವಿಷ್ಣು ಮಾಡಲು ವಾದಿರಾಜರಿಗೆ ಅವಕಾಶ ಸಿಕ್ಕಿತು. ಅದಕ್ಕಾಗಿ ವಾದಿರಾಜರು ಕಲ್ಕತ್ತಾಗೆ ಹೊರಟರು. ವಿಷ್ಣುವಿಗ್ರಹ ಮಂದಿರದ ವಿನ್ಯಾಸಗಳನ್ನು ಅಲ್ಲಿಯೇ ಕುಳಿತು ಮಾಡಿ ವಿಗ್ರಹ ಮತ್ತು ಮಂದಿರದ ಕಂಭಗಳನ್ನು ಮಾಡಿಕೊಡುವುದಾಗಿ ಒಪ್ಪಿಕೊಂಡು ಬಂದರು.



ವಿಷ್ಣು

ವಿಷ್ಣು ವಿಗ್ರಹ ಮಾಡಲು ಕಾಲಾವಕಾಶ ಮಾತ್ರ ಬಹಳ ಕಡಿಮೆಯಿತ್ತು. ಆದರೂ ಒಪ್ಪಿಕೊಂಡು ಬಂದಿದ್ದರು.

ವಿಗ್ರಹ ನಾಲ್ಕೂವರೆ ಅಡಿ ಇರಬೇಕಾಗಿತ್ತು. ಅಷ್ಟು ದೊಡ್ಡ ವಿಗ್ರಹವನ್ನು ಸಂಪ್ರದಾಯ ಶೈಲಿಯಲ್ಲಿ ಅದುವರೆಗೂ ವಾದಿರಾಜರು ಮಾಡಿರಲಿಲ್ಲ. [ಆಳೆತ್ತರದ ಏಸು ಪ್ರತಿಮೆಯನ್ನು ಮರದಲ್ಲಿ ಮಾಡಿದ್ದರು.] ಕಲ್ಕತ್ತಾದಲ್ಲಿ ಅವರಿಗೆ ತೋರಿಸುವುದಕ್ಕಾಗಿ ಚಿಕ್ಕ ಪ್ರಮಾಣದ ರೇಖಾ ಚಿತ್ರ ಮಾಡಿದ್ದರು. ಹಾಗಾಗಿ ಬಂದ ಕೂಡಲೆ ನಾಲ್ಕೂವರೆ ಅಡಿಗಳಿಗೆ ಸರಿಯಾಗಿ ಮೊದಲು ರೇಖಾ ಚಿತ್ರ ತಯಾರಿಸಿದರು. ( ಆಗ ಇನ್ನೂ Xerox ಅನುಕೂಲವಿರಲಿಲ್ಲ. ಕೈಯಲ್ಲೇ ದೊಡ್ಡದು ಚಿಕ್ಕದು ರೇಖಾಚಿತ್ರ ತಯಾರಿಸಬೇಕಿತ್ತು ) ಮೈಸೂರಿಗೆ ಹೋಗಿ ಕಲ್ಲನ್ನು ತಂದರು. ಬೆಂಗಳೂರಿನಲ್ಲೇ ಕೆಲವರನ್ನು ಸಹಾಯಕ್ಕಾಗಿ ಕೇಳಿದರು. ಯಾರೂ ಇವರ ಜೊತೆ ಕೆಲಸ ಮಾಡಲು, ಸರಿಯಾದವರು ಸಿಗಲಿಲ್ಲ. ಸಮಯ ಬಹಳ ಕಡಿಮೆಯಿದ್ದುದರಿಂದ ಮಹಾಬಲಿಪುರಕ್ಕೆ ಹೋಗಿ ಇಬ್ಬರು ಶಿಲ್ಪಿಗಳನ್ನು ಕರೆತಂದರು.

ಮಹಾಬಲಿಪುರಂ ಶಿಲ್ಪಕಲಾ ಶಾಲೆಯಲ್ಲಿ ಶಾಸ್ತ್ರಕ್ಕೆ ಅನುಗುಣವಾಗಿ ಶಿಲ್ಪವನ್ನು ಕಲಿಸುತ್ತಾರೆ. ಐದು ವರ್ಷದ ತರಬೇತಿ ಕೊನೆಯ ವರ್ಷದಲ್ಲಿದ್ದ ಇಬ್ಬರು ವಿದ್ಯಾರ್ಥಿಗಳನ್ನು ಅವರು ವಾದಿರಾಜರ ಸಹಾಯಕ್ಕಾಗಿ ಕಳುಹಿಸಿದ್ದರು. ಉಣ್ಣಿಗನಾದನ್ ಮತ್ತು ಪೆರುವಾಳ್ ಎಂಬ ಆ ಯುವಕರು ಬಹಳ ಚುರುಕಾಗಿದ್ದರು. ವಾದಿರಾಜರ ರೇಖಾ ಚಿತ್ರವನ್ನು (ಹೊಯ್ಸಳ ಶೈಲಿಯದು) ನೋಡಿ ಅವರಿಗೆ ಬಹಳ ಆಶ್ಚರ್ಯವಾಯಿತು. ಏಕೆಂದರೆ ಎಷ್ಟೆಲ್ಲಾ ಆಭರಣ ಅಲಂಕಾರಗಳಿದ್ದರೂ, ವಿಗ್ರಹದ ಪ್ರಮಾಣ, ಅದರ ಸೌಂದರ್ಯ ಕಣ್ಸೆಳೆಯುವಂತಿತ್ತು.

''ಇಷ್ಟು ದೊಡ್ಡ ಚಿತ್ರ ಬಿಡಿಸುವಾಗ ಯಾವ ಸೂತ್ರ ಅನುಸರಿಸಿದಿರಿ ?'' ಎಂದು ಅವರು ಕೇಳಿದಾಗ.

''ನನಗೆ ಶಾಸ್ತ್ರದ ಪರಿಚಯವಿಲ್ಲ. ನಮ್ಮ ಹಿರಿಯರು ಮಾಡಿರುವುದನ್ನು ನೋಡಿ, ಮಾಡುವುದಷ್ಟೇ ನಾನು ಕಲಿತಿರುವುದು. ಹಳೆಯ ಶಿಲ್ಪಗಳೆಲ್ಲ ಶಾಸ್ತ್ರ

ಬದ್ಧವಾಗಿರುವುದರಿಂದ ಅದನ್ನು ಅನುಸರಿಸಿದರೆ ಸಾಕು, ಶಾಸ್ತ್ರವನ್ನು ಬೇರೆ ಕಲಿಯಬೇಕಾಗಿಲ್ಲವೆಂದೇ ನನ್ನ ಭಾವನೆ. ನನಗಂತೂ ಶಾಸ್ತ್ರವನ್ನು ಕಲಿಯಲು ಅವಕಾಶವೇ ಸಿಗಲಿಲ್ಲ'' ಎಂದು ಹೇಳಿ, ಕೆಲಸದ ನಿಮಿತ್ತ ಒಂದು ಘಂಟೆ ಹೊರಗೆ ಹೋಗಿ ಬರುವುದಾಗಿ ಹೇಳಿ ಹೋದರು. ವಾದಿರಾಜರು ಹೊರಗೆ ಹೊದೊಡನೆಯೇ ಅವರಿಬ್ಬರೂ ಮೊದಲು ಮಾಡಿದ ಕೆಲಸ ಇವರು ರಚಿಸಿದ್ದ ರೇಖಾಚಿತ್ರ ತಾಳಬದ್ಧವಾಗಿಯೇ ಎಂದು ಪರೀಕ್ಷಿಸುವುದು. ಮಂದಿರದ ಮೂಲವಿಗ್ರಹಗಳನ್ನು ದಶತಾಳ ಮಾನದಲ್ಲಿ ಮಾಡಬೇಕೆಂದಿದೆ. ಆ ದಿನಗಳಲ್ಲಿ ವಾದಿರಾಜರು ಆ ವಿಷಯದ ಬಗ್ಗೆ ಹೆಚ್ಚು ಯೋಚಿಸುತ್ತಿರಲಿಲ್ಲ. ಅಷ್ಟು ದೊಡ್ಡ ಚಿತ್ರವನ್ನು ಯಾವ ಸೂತ್ರವೂ ಇಲ್ಲದೆ ಕಣ್ಣಂಚಿನಲ್ಲಿ ರಚಿಸಿದ್ದು ಮಹಾಬಲಿಪುರದವರಿಗೆ ಆಶ್ಚರ್ಯವನ್ನುಂಟು ಮಾಡಿ, ಪರೀಕ್ಷೆಗೆ ಕುಳಿತಿದ್ದರು. ವಾದಿರಾಜರು ವಾಪ್ಸು ಬಂದಕೂಡಲೇ ''ನೀವು ಬಹಳ ದೊಡ್ಡವರು. ಬರೀ ಕಣ್ಣಳತೆಯಲ್ಲಿ ಇಷ್ಟು ಪ್ರಮಾಣಬದ್ಧವಾಗಿ ಚಿತ್ರರಚಿಸುವುದು ಸಾಮಾನ್ಯರಿಂದ ಸಾಧ್ಯವಿಲ್ಲ ನಾವಂತೂ ತಾಳೆ ಒಡೆಯುವ ಪದ್ಧತಿಯಲ್ಲೇ ಮಾಡುವವರು. ಈ ರೀತಿ ಮಾಡಿರುವುದನ್ನು ನೋಡಿಯೇ ಇಲ್ಲ. ನಿಮ್ಮ ಕೈಕೆಳಗೆ ಕೆಲಸ ಮಾಡುವುದು ನಮ್ಮ ಪುಣ್ಯವೇ ಸರಿ'' ಎಂದರು.

ಮರುದಿನದಿಂದಲೇ ಕೆಲಸ ಪ್ರಾರಂಭವಾಯಿತು. ಇಪ್ಪತ್ತು ದಿನಗಳಲ್ಲಿ ಸಮಗ್ರ ಆಕಾರವನ್ನೂ ಸ್ಥೂಲವಾಗಿ ಬಿಡಿಸಿದರು. ಅವರು ಹೆಜ್ಜೆ ಹೆಜ್ಜೆಗೂ ಅಳತೆ ತೆಗೆದುಕೊಳ್ಳುತ್ತಿದ್ದರೂ, ಕೆಲವೊಮ್ಮೆ ವ್ಯತ್ಯಾಸಗಳು ಬಂದಾಗ ವಾದಿರಾಜರು ತಮ್ಮ ಅನುಭವದ ಕಣ್ಣಿನಿಂದ ತಿದ್ದುತ್ತಿದ್ದರೆ ಮಹಾಬಲಿಪುರದ ಶಿಲ್ಪಿಗಳು ಪವಾಡ ಕಂಡಂತೆ ಆಶ್ಚರ್ಯಪಡುತ್ತಿದ್ದರು. 20 ದಿನಗಳ ಕೆಲಸ ಮುಗಿದು ಹೊರಡುವಾಗ ಕಾಲು ಮುಟ್ಟಿ ನಮಸ್ಕರಿಸಿ ''ನಿಮ್ಮ ಯಾವುದೇ ಕೆಲಸವಿದ್ದರೂ ಹೇಳಿ, ಬಂದು ಮಾಡುತ್ತೇವೆ. ನಿಮ್ಮಿಂದ ಕಲಿಯಬೇಕಾದುದು ಬೇಕಾದಷ್ಟಿದೆ'' ಎಂದು ವಿನಯದಿಂದ ಪ್ರಾರ್ಥಿಸಿ, ಬೀಳ್ಕೊಂಡರು.

ಗುರುಶಿಷ್ಯ ಪರಂಪರೆಯ ನಮ್ಮ ಕಲಿಕೆಯಲ್ಲಿ ಗುರುವಿನ ಕೆಲಸದಲ್ಲಿ ಕೆಲಸ ಮಾಡಿ ಕಲಿಯುವುದೂ ಮುಖ್ಯವಾಗಿತ್ತು. ವಾರಪೂರ್ತಿ ಸೆಂಟರಿನಲ್ಲಿ ಕೆಲಸ ಮಾಡಿ, ಶನಿವಾರ ಮಧ್ಯಾಹ್ನ ಮಾತ್ರ ವಿಷ್ಣು ವಿಗ್ರಹದಲ್ಲಿ ಕೆಲಸ

ಮಾಡಲು ಹೋಗುತ್ತಿದ್ದರು, ಹಾಗಾಗಿ ಅವರು ಅದರಲ್ಲಿ ಕೆಲಸ ಮಾಡುತ್ತಿದ್ದರು. ನಾವು ಬರೀ ಗಮನಿಸುತ್ತಿದ್ದೆವು. ವಿಗ್ರಹ ಮುಗಿದು, ಸಮಯಕ್ಕೆ ಸರಿಯಾಗಿ ಕಲ್ಕತ್ತಾಗೂ ತಲುಪಿಸಿ ಬಂದರು.

ಸುದೈವವೋ ದುರ್ದೈವವೊ ಕಾರಣಾಂತರಗಳಿಂದ ನಮ್ಮ ತರಬೇತಿ ಒಂದೂವರೆ ವರ್ಷಕ್ಕೆ ನಿಲ್ಲುವಂತಾಯಿತು. ನಾನು ಮತ್ತು ಶ್ಯಾಮಾಚಾರ್ಯರು ಮಾತ್ರ ನಮ್ಮ ಕಲಿಕೆಯನ್ನು ವಾದಿರಾಜರಲ್ಲೇ ಮುಂದುವರೆಸಿದೆವು.

ಇದೇ ಸಮಯದಲ್ಲಿ ದುಬೆಯವರು ಮನೆ ಬಿಡಬೇಕಾಯಿತು. ಬಸವನಗುಡಿಯ ಹನುಮಂತ ನಗರದಲ್ಲಿ ಮನೆ ಮಾಡಿದರು. ನಾನೂ, ಶ್ಯಾಮಾಚಾರ್ಯರೂ ಬೆಳಿಗ್ಗೆ 10 ರಿಂದ 5 ಘಂಟೆಯವರೆಗೆ ಅವರ ಮನೆಗೇ ಹೋಗಿ ಕೆಲಸ ಕಲಿಯುತ್ತಿದ್ದೆವು. ಅವರ ಎಲ್ಲ ಕೆಲಸಗಳಲ್ಲೂ ಭಾಗಿಯಾಗುತ್ತಿದ್ದುದರಿಂದ ಸ್ವಲ್ಪ ಸ್ವಲ್ಪ ಹಣವೂ ಸಿಗುತ್ತಿತ್ತು. ಆಗ ಒಮ್ಮೆ ಬಂದ ಹರಿಹರ್ಕರವರು ನಾವಿಬ್ಬರೂ ಅಲ್ಲಿ ಕೆಲಸ ಮಾಡುತ್ತಿದ್ದುದನ್ನು ನೋಡಿ "ದುಡ್ಡಿನ ಆಸೆಗೆ ಆ Training Schemeಗೆ ಹೋಗದೆ ವಾದಿರಾಜರ ಜೊತೆಗೇ ಬಂದಿರಲ್ಲ. ಇದು ನಿಜವಾದ ಗುರು-ಶಿಷ್ಯ ಪರಂಪರೆ" ಎಂದು ಸಂತೋಷಪಟ್ಟರು. ಆಗ ಒಂದು ಮದನಿಕೆ, ಅಂದಿನ ಗೌರ್ನರ್ ಆಗಿದ್ದ ಶ್ರೀಧರ್ಮವೀರರವರಿಗಾಗಿ ಒಂದು ಗಂಧದ ಸಿಂಹಾಸನ ಮಾಡುವ ಬೇಡಿಕೆಯಿತ್ತು. ನನಗೂ ಶ್ಯಾಮಾಚಾರ್ಯರಿಗೊ ಅದರಲ್ಲಿ ಹೆಚ್ಚಿನ ಕೆಲಸ ಮಾಡುವ ಅವಕಾಶವೂ ಸಿಕ್ಕಿತು. ವಾದಿರಾಜರು ನಮ್ಮನ್ನು ಮಕ್ಕಳಂತೆಯೇ ನೋಡಿಕೊಳ್ಳುತ್ತಿದ್ದುದರಿಂದ ನಮಗೆ ಹಣವನ್ನೂ ಕೊಡುತ್ತಿದ್ದರು.

1969ರಲ್ಲೇ ವಾದಿರಾಜರಿಗೆ ಮದನಿಕಾ ವಿಗ್ರಹ ಮಾಡುವ ಅವಕಾಶ ಸಿಕ್ಕಿತೆಂದು ಮೊದಲೇ ಹೇಳಿದ್ದೆ. ಆ ಸಮಯದಲ್ಲಿ ಬೇಲೂರಿಗೆ ಹೋಗಿ ಅಲ್ಲಿ ಮದನಿಕೆಯರ ಛಾಯಾಚಿತ್ರಗಳನ್ನು ಸರ್ಕಾರದ ಅನುಮತಿ ಪಡೆದು ತೆಗೆಸಿ ತಂದರು. ಎಲ್ಲ ಮದನಿಕಾ ವಿಗ್ರಹಗಳನ್ನು ಮಾಡುವ ಅವಕಾಶವಿತ್ತು. ವಿಗ್ರಹ ಮಾಡಿಸಲು ಬಂದ ಬಾಂಬೆಯವರಂತೆ 3 ತಿಂಗಳಿಗೆ ಒಂದು ವಿಗ್ರಹ ಮಾಡಬೇಕೆಂದು ನಿರ್ಬಂಧ ಮಾಡಿದರು. ಒಂದನ್ನು ಮಾಡಲು ಆರು ತಿಂಗಳು

ತೆಗೆದುಕೊಂಡ ವಾದಿರಾಜರಿಗೆ ಈ ರೀತಿಯ ನಿರ್ಬಂಧದಲ್ಲಿ ಕೆಲಸ ಮಾಡುವ ಮನಸ್ಸಿಲ್ಲದೆ ಒಂದಕ್ಕೇ ನಿಲ್ಲಿಸಿದರು. ಆಗ ನನಗೂ ಶ್ಯಾಮಾಚಾರ್ಯರಿಗೂ ಚಿಕ್ಕ ಚಿಕ್ಕ ಕಲ್ಲುಗಳನ್ನು ತಂದುಕೊಟ್ಟು ನಮಗೂ ಮದನಿಕೆಗಳನ್ನೂ ಮಾಡಲು ಹೇಳಿದ್ದರು. ನಾನು ಮಾಡುತ್ತಿದ್ದಾಗ ನನ್ನ ಹಳೆಯ ಗುರುಗಳಾದ ಕಲಾಮಂದಿರದ ಶ್ರೀ ಎ. ಎನ್. ಸುಬ್ಬರಾಯರು ಬಂದು ನೋಡಿ, ಲಲಿತಕಲಾ ಅಕಾಡೆಮಿಯ ವಾರ್ಷಿಕ ಸ್ಪರ್ಧೆಗೆ ಇಟ್ಟರು. ಮೊದಲ ಬಹುಮಾನವೇನೋ ಬಂತು.

ವಾದಿರಾಜಗೆ ಇಂಗ್ಲೀಷ್ ಕಲಿಯುವ ಅವಕಾಶ ಸಿಕ್ಕಿದ್ದು ಈ ಸಮಯದಲ್ಲೇ ಹರಿಹರ್ಸರವರು ಮೂವರು ಜಪಾನೀ ತರುಣರನ್ನು ಇವರಲ್ಲಿ ಮರದ ಕೆತ್ತನೆ ಕಲಿಯಲು ಕರೆತಂದರು. ಆ ಮೂವರು H.M.T. ಕಾರ್ಖಾನೆಗೆ ಸಲಹೆಗಾರರಾಗಿ ಬಂದಿದ್ದ ಇಂಜಿನಿಯರ್‌ಗಳು. ಜೊತೆಯಲ್ಲಿ ಚಿತ್ರಕಲಾವಿದರು ಕೂಡ, ಒಂದು ವರುಷದ ಅವಧಿ ಭಾರತದಲ್ಲಿರುವಾಗ ಇಲ್ಲಿ ಸಂಪ್ರದಾಯ ಕೆತ್ತನೆ ಕಲಿಯಬೇಕೆಂದು ಬಯಸಿ ಬಂದಿದ್ದರು. ಅವರಿಗೂ ಇಂಗ್ಲೀಷ್ ಬರುತ್ತಿರಲಿಲ್ಲ. ಇಲ್ಲಿ ಬಂದ ಮೇಲೆ ಬರೀ ಸಂಭಾಷಣೆ ಕಲಿತಿದ್ದರು. ಕೆತ್ತನೆ ವಾರದಲ್ಲಿ ಒಂದು ದಿನ ಮಾತ್ರ ಮೂವರೂ ಒಳ್ಳೆಯ ಫೀಜು ಕೊಡುತ್ತಿದ್ದರು. ಜೊತೆಗೆ ಬಹಳಗುರುಭಕ್ತಿ. ಅವರೊಡನೆ ಮಾತನಾಡುವುದು ಇಂಗ್ಲೀಷ್ ಆಗಿದ್ದರಿಂದ ಒಂದು ವರ್ಷದ ಅವಧಿಯಲ್ಲಿ ವಾದಿರಾಜರು ಸುಲಭವಾಗಿ ಸಂಭಾಷಣೆ ಮಾಡುವುದನ್ನು ಕಲಿತರು. ಈ ಅವಧಿ ಮುಗಿಯುತ್ತಿದ್ದಂತೆ ಹನುಮಂತನಗರದ ಮನೆ ಬಿಡಬೇಕಾಯಿತು. ಅಲ್ಲಿಂದ ಶಂಕರಪುರದಲ್ಲಿ ಒಂದು ಮನೆ ಮಾಡಿದರು. ಇಲ್ಲಿ ಬಂದಾಗ ವಾದಿರಾಜರಿಗೆ ಬಹಳ ತೊಂದರೆಯಾಯಿತು. ಮನೆಯಲ್ಲಿ ವಾಸ ಮಾಡಲು ಮಾತ್ರ ಸ್ಥಳವಿತ್ತು. ಕೆಲಸಕ್ಕಾಗಿ ಒಂದು ದೊಡ್ಡ ಚಪ್ಪರ ಹಾಕಿಸಿದರು. ಸಾಮಾನುಗಳನ್ನೂ ಅಲ್ಲೇ ಇಡುತ್ತಿದ್ದರು. ಇಲ್ಲಿಗೆ ಬಂದ ಮೇಲೆ ಕಲ್ಲು ಮರಗಳಿಗೆ ಬದಲಾಗಿ ಬರೀ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ಮಾಡುವ ಕೆಲಸಗಳಿಗೇ ಬೇಡಿಕೆ ಬರುತ್ತಿತ್ತು. ಜೀವನಕ್ಕಾಗಿ ಏನಾದರೂ ಮಾಡಲೇಬೇಕಲ್ಲ. ಹೋಟೆಲ್‌ಗಳಿಗೇ, ಮನೆಗಳಿಗೆ, ಅಲಂಕಾರಕ್ಕಾಗಿ

ಪ್ಯಾನಲ್‌ಗಳನ್ನು (Panels) ಸಿಮೆಂಟು ಪ್ಲಾಸ್ಟರ್‌ಗಳಲ್ಲಿ ಮಾಡಿದರು. ಅಂತಹ ಕೆಲಸದಲ್ಲೂ ವಾದಿರಾಜರು ಅಸಡ್ಡೆ ತೋರಿಸಲಿಲ್ಲ. "ನೋಡಿ ನಮಗೇ ಏಕೆ ಇಂತಹ ಕೆಲಸ ಬರುತ್ತದೆ ? ಅಂತಹ ಕೆಲಸಗಳಲ್ಲೂ ಕಲಿಯುವ ಪಾಠ ಇರುತ್ತದೆ" ಎಂದು ನಮಗೆ ಧೈರ್ಯತುಂಬಿ, ಅಚ್ಚು ತೆಗೆಯುವುದು, ಅದರಿಂದ ಪ್ರತಿಕೃತಿ ಮಾಡುವುದು, ಇದನ್ನೆಲ್ಲಾ ವಿವರವಾಗಿ ಕಲಿಸಿದರು. ಅಂದು ಕಲಿತ ಪಾಠದಿಂದ ಇಂದಿಗೂ ಎಂತಹ ವಿಗ್ರಹವಿರಲಿ, ಅದರ ಪ್ರತಿಕೃತಿ ಮಾಡಬೇಕಾದರೆ, ಸುಲಭವಾಗಿ ಅಚ್ಚು ತೆಗೆಯುವ ಕೆಲಸವನ್ನು ನಾವೇ ಮಾಡಿಕೊಳ್ಳುತ್ತೇವೆ.

## ಸಂಶೋಧನೆಯ ಮೊದಲ ಹೆಜ್ಜೆ

ಶಂಕರಪುರದ ಮನೆಗೆ ಬಂದ ಮೇಲೆ ಒಂದು ಸಂಶೋಧನೆಗೆ ಅವಕಾಶ ಸಿಕ್ಕಿತು. ಆದರೆ ಅದರ ಹಿಂದೆ ಅನುಭವಿಸಿದ ಯಾತನೆಯನ್ನು ಮರೆಯುವಂತೆಯೇ ಇಲ್ಲ. 'ನಾನ್‌ಕಿಂಗ್' ಹೋಟೆಲ್ ಗ್ರಾಂಟ್ ರಸ್ತೆಯಲ್ಲಿ ಪ್ರಾರಂಭವಾದ ಸಂದರ್ಭ. 1970ನೇ ಇಸವಿಯಲ್ಲಿ. ಚೈನಾದ ಉದ್ಯಮಿಯೊಬ್ಬ (Mr.Thom) ಜಪಾನೀ ಶೈಲಿಯಲ್ಲಿ ಹೋಟೆಲ್ ಪ್ರಾರಂಭಿಸಿದರು. ಆಗ ಇಂಡಿಯಾದಲ್ಲಿ ಚೈನಾದವರಿಗೆ ತೊಂದರೆಯಿದ್ದ ಕಾಲ. ಜಪಾನೀ ಶೈಲಿಯಲ್ಲಿ ಯೋಜಿಸಿದ ಹೋಟೆಲ್ ನಿರ್ಮಾಣ ಕಾರ್ಯದಲ್ಲಿ ಹರಿಹರ್ರರವರ ಸಲಹೆ ಕೇಳಿದರು. ಇಂತಹ ಯೋಜನೆಗಳನ್ನು ತಯಾರಿಸುವುದರಲ್ಲಿ ಹರಿಹರ್ರರವರದು ಎತ್ತಿದ ಕೈ. ಮುಂಬಾಗಿಲಿನಿಂದ ಹಿಡಿದು, ಒಳ ಅಲಂಕಾರ, ಮೇಲ್ಹಾವಣಿಯ ಅಲಂಕರಣಕ್ಕೆ (False roofing) ವಾದಿರಾಜರು ವಿನ್ಯಾಸ ಮತ್ತು ಮೂಲಕೃತಿಯನ್ನು ಮಾಡಿಕೊಟ್ಟರು. ಅವರ ಶಿಷ್ಯ ಕೃಷ್ಣಮೂರ್ತಿ (ಚಿತ್ರಗುಪ್ತ ಹ್ಯಾಂಡಿಕ್ರಾಫ್ಟ್ಸ್) ಫಲಕಗಳನ್ನು ತಯಾರಿಸಿದರು. ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ಪ್ಲಾಸ್ಟರ್‌ನಲ್ಲಿ ಫಲಕಗಳನ್ನು ಮಾಡುತ್ತಿದ್ದ ಅನುಭವ ಇಲ್ಲಿ ಉಪಯೋಗವಾಯಿತು. 6'x3'ಎತ್ತರದ ಗಾಜಿನ ಫಲಕಗಳ ಅಲಂಕರಣವನ್ನು ವಾದಿರಾಜರೇ ಮಾಡಬೇಕಿತ್ತು, Cut Glass ರೀತಿ ಕಾಣುವಂತೆ. ಆರು ಗಾಜಿನ ಫಲಕಗಳಲ್ಲಿ ನಾಲ್ಕು ಜಪಾನೀ ಸುಂದರಿಯರದು, ಎರಡು ಹೂವಿನ

ವಿನ್ಯಾಸವಿರುವಂತಹ ಚಿತ್ರಗಳು. ಗಾಜಿನ ಮೇಲೆ ಎಂತಹ ಬಣ್ಣಗಳು ನಿಲ್ಲುವುದು ಕಷ್ಟ. ಜೊತೆಗೆ ಅದರ ಹಿಂದೆ ಬೆಳಕು ಬಿಟ್ಟಾಗ ಒಂದೇ ರೀತಿಯಲ್ಲಿ ಕಾಣಬೇಕು. (ever spreading of colour) ಬಣ್ಣಗಳ ಹುಡುಕಾಟದಲ್ಲಿಯೇ ಮೂರು ತಿಂಗಳುಗಳು ಕಳೆದು ಹೋದವು. ಅವರು ಈ ಕೆಲಸ ಮಾಡಲು ಕೊಟ್ಟಿದ್ದ ಅವಧಿ ಮೂರು ತಿಂಗಳು. ಅಷ್ಟು ದಿನಗಳ ಶೋಧನೆಯ ಫಲವಾಗಿ ಒಂದೇ ಒಂದು ಫಲಕ ಸಿದ್ಧವಾಗಿತ್ತು. ಇದಕ್ಕೆ ನೆರವಾಗಿದ್ದವರು ಡಾ. ಡಿ.ವಿ. ಗುಂಡಪ್ಪನವರ ತಮ್ಮಂದಿರಾದ ಡಿ.ವಿ. ರಾಮರಾಯರು. ಹೋಟೆಲಿನ ಉದ್ಘಾಟನೆಗೆ 10 ದಿನಗಳು ಮಾತ್ರ ಉಳಿದಿದ್ದುದರಿಂದ ಫಲಕಗಳನ್ನು ತೆಗೆದುಕೊಂಡು ಹೋಗಲು ಹರಿಹರ್ರರವರು ಬಂದೇ ಬಿಟ್ಟರು. ನೋಡಿದರೆ ಒಂದೇ ಫಲಕ ಸಿದ್ಧವಾಗಿರುವುದು. ಹರಿಹರ್ರರವರಿಗೆ ಕೋಪ ಬಂದಿತ್ತು. ಆ ದಿನ ವಾದಿರಾಜರಿಗೆ ಬಹಳ ಜ್ವರವಿತ್ತು. ಯಾವುದನ್ನೂ ಲೆಕ್ಕಿಸದೆ, ಎಲ್ಲವನ್ನೂ ಹಿಂದಿರುಗಿಸುವಂತೆ ಹೇಳಿ, ಹರಿಹರ್ರರವರು ಹೊರಟೇ ಹೋದರು. ಶ್ಯಾಮಾಚಾರ್ ಮತ್ತು ನಾನೂ ಅಲ್ಲೇ ಇದ್ದೆವು. ನಮಗೆ ಅದನ್ನು ನೋಡಿ ಬಹಳ ಕಷ್ಟವಾಯಿತು. ಈಗಷ್ಟೇ ಪ್ರಯೋಗ ಯಶಸ್ವಿಯಾಗಿತ್ತು. ಆದರೆ ಹೋಯಿತಲ್ಲ ಎಂಬ ಕೊರಗು. ಅದನ್ನು ಸಾಗಿಸಲು ಟೆಂಪೋಗೆ ಬಾಡಿಗೆ ಕೊಡಲು ಸಹ ಹಣ ವಿರಲಿಲ್ಲ. ಇದರ ಮೇಲೆ ವಾದಿರಾಜರಿಗೆ ತುಂಬಾ ಜ್ವರವಿತ್ತು. ನಾನು ಕೂಡಲೇ ಮನೆಗೆ ಬಂದು ಹಣವನ್ನು ತೆಗೆದುಕೊಂಡು ಹೋಗಿಕೊಟ್ಟೆ. ವಾದಿರಾಜರು ಜೊತೆಯಲ್ಲಿ ಶ್ಯಾಮಾಚಾರ್ಯರನ್ನು ಕರೆದುಕೊಂಡು ಟೆಂಪೋದಲ್ಲಿ ಗಾಜುಗಳನ್ನೆಲ್ಲ ಇಟ್ಟುಕೊಂಡು ಹೊರಟರು. ಅವರು ಬಹಳ ಪೆಚ್ಚಾಗಿದ್ದರು. ನನಗಂತೂ ಬಹಳ ದುಃಖವಾಗಿತ್ತು. ಅಳುತ್ತಲೇ ಮನೆಗೆ ಬಂದು ಅವರು ವಾಪಸ್ಸು ಬರುವುದನ್ನೇ ಕಾಯುತ್ತಿದ್ದೆ. ಸುಮಾರು 12 ಘಂಟೆಗೆ ಹೋದವರು ಸಂಜೆ 6 ಘಂಟೆಗೆ ತಿರುಗಿ ಬಂದರು. ಬರುವಾಗ ವಾದಿರಾಜರ ಮುಖ ಅರಳಿತ್ತು. ಅವರ ಚಿತ್ರಣ ಎಲ್ಲರಿಗೂ ಮೆಚ್ಚುಗೆಯಾಗಿತ್ತು. 8 ದಿನಗಳಲ್ಲಿ ಮಿಕ್ಕ 5 ಚಿತ್ರಣಗಳನ್ನು ಅಲ್ಲಿಯೇ ಮಾಡಿ ಮುಗಿಸಿಕೊಡುವುದಾಗಿ ಒಪ್ಪಿಕೊಂಡು ಬಂದಿದ್ದರು. ವಾದಿರಾಜರಿಗೆ ಬಹಳ ಜ್ವರವಿದ್ದುದರಿಂದ ನಾನೂ, ಶ್ಯಾಮಾಚಾರ್ ಅವರ ಜೊತೆಯಲ್ಲಿ ಹೋಗಿ Namking Restaurantನಲ್ಲಿ

ಕುಳಿತು ಕೆಲಸ ಮಾಡಿದೆವು. ಉದ್ಘಾಟನೆಯ ದಿನ ಎಲ್ಲರೂ ಇವು ಜಪಾನಿನಿಂದ ತರಿಸಿದ ಚಿತ್ರಣಗಳೇ ಎಂದು ಕೇಳುತ್ತಿದ್ದರೆ, ಹರಿಹರ್ರರವರು ಜಪಾನೀ ಚಿತ್ರಣಗಳನ್ನು ಮಾಡುವ ಕಲಾವಿದರೇ ನಮ್ಮಲ್ಲಿದ್ದಾರೆ ಎಂದು ಅಭಿಮಾನದಿಂದ ವಾದಿರಾಜರ ಕಡೆಗೆ ತೋರಿಸುತ್ತಿದ್ದರು. ಹರಿಹರ್ರರವರ ಕೋಪ ಕರಗಿ, ವಾದಿರಾಜರಿಗೆ ನೆಮ್ಮದಿಯಾಗಿತ್ತು.

1971-72ರ ಇಸವಿ ಹೇಳಿಕೊಳ್ಳುವಂತಹ ಕೆಲಸಗಳೂ ಇರಲಿಲ್ಲ. ಜೊತೆಗೆ ಶಂಕರಪುರದ ಮನೆಯ ಮಾಲೀಕ ತೊಂದರೆ ಕೊಡಲು ಪ್ರಾರಂಭಿಸಿದ ಮನೆಯಲ್ಲಿ ನೆಮ್ಮದಿಯೇ ಇರಲಿಲ್ಲ. ನಮ್ಮಿಬ್ಬರನ್ನೂ ತಮ್ಮ ಜೊತೆ ಸೇರಿಸಿಕೊಂಡು ಅನ್ಯಾಯ ಮಾಡುತ್ತಿದ್ದೇನಲ್ಲ ಎಂದು ವಾದಿರಾಜರು ಕೊರಗುತ್ತಿದ್ದರು. ನನಗಾಗಲೀ ಶ್ಯಾಮಾಚಾರ್ಯರಿಗಾಗಲೀ ಹಾಗೇನೂ ಅನ್ನಿಸಿರಲಿಲ್ಲ, ಜೊತೆಯಲ್ಲಿರುವ ತೀರ್ಮಾನ ಮಾಡಿಯೇ ಬಂದಿದ್ದೆವಲ್ಲ, ಒಳ್ಳೆಯ ದಿನಗಳು ಬರಲಾರವೆ ಎಂದು ಕಾಯುತ್ತಿದ್ದೆವು. ಎಂದಿನಂತೆ ನಮ್ಮ ಅಧ್ಯಯನ ಮಾತ್ರ ನಡೆದಿತ್ತು. ಒಳ್ಳೆಯ ದಿನಗಳು ಬರದಿದ್ದರೂ ಒಳ್ಳೆಯ ವ್ಯಕ್ತಿಯೊಬ್ಬ ಸ್ನೇಹ ದೊರೆತದ್ದು ವಾದಿರಾಜರಿಗೆ ನಿಧಿ ಸಿಕ್ಕಂತಾಗಿತ್ತು. ಖ್ಯಾತ ಹಿಂದೂಸ್ಥಾನೀ ಗಾಯಕ ರಾಮರಾವ್ ನಾಯಕರು ಆ ವೇಳೆಗಾಗಲೇ ನನ್ನ ತಂಗಿಗೆ ಪಾಠ ಹೇಳುತ್ತಿದ್ದರು. ಪರಿಚಯವಿತ್ತೇ ಹೊರತು, ಹೆಚ್ಚಿನ ಮಾತುಕತೆಗಳಿಗೆ ಅವಕಾಶವಿರಲಿಲ್ಲ. ಕಾರಣ ರಾಯರಾಯರು ಯಾವಾಗಲೂ ಕಾರ್ಯನಿರತರಾಗಿರುತ್ತಿದ್ದರು. ಮನೆಯ ಮಾಲೀಕ ರಾತ್ರಿ ಕುಡಿದು ಬಂದು ತೊಂದರೆ ಮಾಡುತ್ತಿದ್ದುದು ತಮ್ಮ ಮಗನ ಮೂಲಕ ತಿಳಿಯಿತು. (ಅವರ ಮಗ, ವಾದಿರಾಜರ ಮಗ ಇಬ್ಬರೂ ಸಂಜೆ ಒಟ್ಟಿಗೆ ಕ್ರಿಕೆಟ್ ಆಡುತ್ತಿದ್ದರು) ಕೂಡಲೇ ಬಂದು ವಾದಿರಾಜರನ್ನು ಕಂಡು, ವಿಚಾರಿಸಿ, ಧೈರ್ಯ ಹೇಳಿದರು. ತಾವು ಪಕ್ಕದಲ್ಲಿಯೇ ಇರುವುದಾಗಿಯೂ ಯಾವ ಸಮಯದಲ್ಲಿ ಕರೆದರೂ ಬರುವುದಾಗಿಯೂ ಯೋಚಿಸಬಾರದೆಂದೂ ಹೇಳಿ ಹೋದರು. ಒಬ್ಬ ಸಭ್ಯ ಕಲಾವಿದನಿಗೆ ಇಂತಹ ಪರಿಸ್ಥಿತಿ ಬಂದಿದ್ದು ಅವರ ಮನವನ್ನು ಕರಗಿಸಿತ್ತು. ಬರೀ ಬಾಯಿಯಲ್ಲಿ ಹೇಳಿ ಹೋದವರಲ್ಲ, ಆ ಕಾಲದಲ್ಲಿ ಮೋಟರ್ ಸೈಕಲ್‌ನಲ್ಲಿ ಓಡಾಡುತ್ತಿದ್ದರು, ಯಾವಾಗೆಂದರೆ ಆವಾಗ, ಆ ಕಡೆ ಈ ಕಡೆ

ಓಡಾಡುವಾಗ, ಬಂದು ನೋಡಿಕೊಂಡು ಹೋಗುವುದು, ಕಷ್ಟ ಸುಖಗಳನ್ನು ವಿಚಾರಿಸಿ ಹೋಗುತ್ತಿದ್ದರು. ಅಂದು ರಾಮರಾವ್ ನಾಯಕ್ ಬಂದು ಸಹಾಯ ಮಾಡಿದ್ದನ್ನು ವಾದಿರಾಜರು ಮರೆಯಲೇ ಇಲ್ಲ. ಈ ಸ್ನೇಹ ನಿರಂತರವಾಗಿ ಮುಂದುವರೆಯಿತು. ರಾಮರಾಯರ ವಿದ್ಯೆ ಪಾಂಡಿತ್ಯಗಳ ಜೊತೆಗೆ ಅವರ ದೈವಭಕ್ತಿ, ಸರಳ, ನಡೆನುಡಿ ವಾದಿರಾಜರಿಗೆ ಬಹಳ ಮೆಚ್ಚುಗೆಯಾಯಿತು. ಕಷ್ಟಗಳು ಬಂದರೂ ಜೊತೆಯಲ್ಲಿ ಎಂತಹ ಭಾಗ್ಯ ದೊರೆಯಿತು ಎನ್ನುತ್ತಿದ್ದರು.

ಕೊನೆಗೂ ಶಂಕರಪುರದ ಮನೆ ಬಿಡಲು ಸಾಧ್ಯವಾಯಿತು. Indian Institute of world culture ನ ಪಕ್ಕದ ಒಂದು ಮನೆ ಸಿಕ್ಕಿತು. ನಾನು ಕೃಷ್ಣರಾಜೇಂದ್ರ ರಸ್ತೆಯಲ್ಲಿ ಮನೆ ಮಾಡಿದ್ದೆ. ಮೊದಲಿಗಿಂತ ವಾದಿರಾಜರ ಮನೆ ಬಹಳ ಹತ್ತಿರವಾಯಿತು. ಇಲ್ಲಿಯೂ ಕೆಲಸಕ್ಕಾಗಿ ಚಪ್ಪರದ ನಿರ್ಮಾಣವಾಯಿತು. ಮನೆಯನ್ನೂ ಸಿದ್ಧಗೊಳಿಸುವ, ಎಲ್ಲ ಕೆಲಸಗಳಲ್ಲೂ ಭಾಗಿಗಳಾಗುವ ಅವಕಾಶ, ನನಗೂ ಶ್ಯಾಮಾಚಾರ್ಯರಿಗೂ ಸಿಕ್ಕಿತು. S.S.L.C.ಯಲ್ಲಿ ಓದುತ್ತಿದ್ದ ಸುಬ್ಬಣ್ಣ, ಬಿಡುವಿನ ವೇಳೆಯಲ್ಲಿ ನಮ್ಮ ಜೊತೆ ಚಪ್ಪರದಲ್ಲಿ ಬಂದು ಕುಳಿತು, ಪ್ಲಾಸ್ಟರ್ ತುಂಡುಗಳಲ್ಲಿ ನಾವು ಮಾಡಿದಂತೆ ಕೆತ್ತನೆಯನ್ನೂ ಕೊಡುತ್ತಿದ್ದ. ಅವೆನ್ಯೂ ರಸ್ತೆಯಲ್ಲಿರುವ ಆಭರಣಗಳಿಗಾಗಿ ಸುಂದರ ಗೊಂಬೆಯನ್ನು ತಯಾರಿಸುವ ಕೆಲಸ ಮಾತ್ರವಿತ್ತು. ಒಂದು ರೀತಿ ಸ್ಥಗಿತಗೊಂಡ ಚಟುವಟಿಕೆಗಳು, ಏನೂ ಹೇಳಲಾರದ ನೋವಿದ್ದರೂ ವಾದಿರಾಜರು ಮಾತ್ರ ಯಾವ ಕಷ್ಟಗಳನ್ನು ಲೆಕ್ಕಿಸುತ್ತಿರಲಿಲ್ಲ. "ಸಾವಿಗಿಂತ ಕಷ್ಟವಿಲ್ಲ. ಜೀವಂತವಾಗಿ ಆರೋಗ್ಯವಾಗಿ ಇದ್ದರೆ ಏನೇ ಕಷ್ಟಬಂದರೂ ಎದುರಿಸಬಹುದು" ಎಂದು ಎಂದಿನಂತೆ ನಗುನಗುತ್ತಾ ಪಾಠ ಹೇಳಿಕೊಡುತ್ತಿದ್ದರು.

ಈ ಮನೆಯಲ್ಲಿ ಮೂರುತಿಂಗಳು ಕಳೆಯುವುದರೊಳಗಾಗಿ ಒಂದು ದಿನ ಹರಿಹರ್ ಬಂದು ಒಂದು ವಿಶೇಷ ಸುದ್ದಿಕೊಟ್ಟರು. ಕೃಷ್ಣ ರಾಜೇಂದ್ರ ರಸ್ತೆಯಲ್ಲಿ ನ್ಯಾಷನಲ್ ಸ್ಕೂಲ್ ವೃತ್ತದ ಬಳಿ, ಶ್ರೀನಾರಾಯಣ ಎಂಬುವರ ಮನೆ ಖಾಲಿಯಿದೆ ಎಂದು ಶ್ರೀ ಕೆ.ವಿ. ನಾರಾಯಣ್ ಜಪಾನಿನಲ್ಲಿ

ಪತ್ರಿಕೋದ್ಯಮಿಯಾಗಿ ಅಲ್ಲೇ ಇದ್ದರು. 3 ವರ್ಷ ಆ ಮನೆಯಲ್ಲಿ ನೋಡಿಕೊಳ್ಳುವವರು ಬೇಕಿತ್ತು. ಮನೆ ಬಹಳ ದೊಡ್ಡದಾಗಿತ್ತು. ಬಾಡಿಗೆ ಎಷ್ಟು ಕೊಡಲು ಸಾಧ್ಯವೋ ಅಷ್ಟು ಕೊಟ್ಟರೆ ಸಾಕು ಎಂದರು. ಜೊತೆಗೆ ಅಷ್ಟು ದೊಡ್ಡ ಜಾಗ ಸಿಕ್ಕಾಗ ಅದನ್ನು ಒಂದು ಕಲಿಕೆಯ ಕೇಂದ್ರವನ್ನಾಗಿ ಏಕೆ ಮಾಡಬಾರದು ಎಂದು ಹರಿಹರ್ರರವರ ಬಯಕೆ. ಹೀಗಾಗಿ HIND-NIPPON CRAFT TRAINING CENTRE ಪ್ರಾರಂಭವಾಯಿತು. ಜಪಾನಿನಲ್ಲಿ ಮಹಿಳೆಯರು ತಮ್ಮ ಬಿಡುವಿನ ವೇಳೆಯಲ್ಲಿ ಏನಾದರೂ ಕೈಕೆಲಸ ಮಾಡುತ್ತ, ಹಣ ಸಂಪಾದಿಸುತ್ತಾರೆ. ಇದರಿಂದ ಸಮಯದ ಸದುಪಯೋಗವಾಗುತ್ತದೆ. ನಮ್ಮಲ್ಲಿ ಮಹಿಳೆಯರು ತಮ್ಮ ಮನೆ ಕೆಲಸವಾದ ಮೇಲೆ ಬಿಡುವಿನ ವೇಳೆಯನ್ನು ಹಾಗೆಯೇ ಕಳೆಯುತ್ತಾ ಇದ್ದ ಕಾಲ ಅದು. ಅದಕ್ಕಾಗಿ ಜಪಾನೀಯರಂತೆ ನಮ್ಮ ಮಹಿಳೆಯರಿಗೂ ತಮ್ಮ ಬಿಡುವಿನ ವೇಳೆಯನ್ನು ಉಪಯೋಗಿಸುವುದನ್ನು ಕಲಿಸುವುದಕ್ಕಾಗಿ ಇಂಡಿಯಾದಲ್ಲಿ ನಡೆಸುವ ಈ ಕೇಂದ್ರಕ್ಕೆ 'ಹಿಂದ್-ನಿಪ್ಪನ್' ಎಂದು ಹೆಸರಿಟ್ಟರು. ಇಲ್ಲಿ Leather ಬಾಟಿಕ್ (ಚರ್ಮದ ಬಾಟಿಕ್) Screen printing, wood carving (ಮರದ ಕೆತ್ತನೆ) Ceramic decoration, Doll Making ಹಾಗೂ ಇಕೆಬಾನ, ಇವುಗಳನ್ನು ಕಲಿಸುವುದೆಂದು ತೀರ್ಮಾನಿಸಿದರು. ಈ ಎಲ್ಲ ಕಲೆಗಳನ್ನೂ ಹರಿಹರ್ರರವರೇ ನಮ್ಮ ಮೂವರಿಗೂ ಕಲಿಸಿದರು. ಮೊದಲ ಆರು ತಿಂಗಳ ತರಬೇತಿ ಪ್ರಾರಂಭವಾಯಿತು. ಕಲಿಯಲು ಬಹಳ ಜನ ಬಂದರು. ನಾವು ಕೂಡ ದಿನದಲ್ಲಿ ಎರಡೇ ಘಂಟೆಗಳು ಕಲಿಸುವುದು ಎಂದಿತ್ತು. ಆದರೂ ದಿನವೆಲ್ಲ ಅದೇ ಕೆಲಸಗಳು ನಡೆಯುತ್ತಿದ್ದವು. ನಮಗೂ ಈ ಹೊಸ ಕಲೆಗಳನ್ನು ಕಲಿಯುವುದರಲ್ಲಿ ಉತ್ಸಾಹವಿರುತಿತ್ತು. ಆರು ತಿಂಗಳ ಅವಧಿಯಲ್ಲಿ 60 ಜನ ಮಹಿಳೆಯರು ತರಬೇತಿ ಪಡೆದರು. ಅಷ್ಟರಲ್ಲೇ ಹರಿಹರ್ರರವರು ಹಠಾತ್ತಾಗಿ ನಿಧನಹೊಂದಿದರು. ನಮಗೆಲ್ಲ ದಿಕ್ಕೇ ತೋಚದಂತಾಯಿತು. ವಾದಿರಾಜರು ತಂದೆಯನ್ನು ಕಳೆದುಕೊಂಡಂತಾದರು. ಈ ತರಬೇತಿ ಕೇಂದ್ರ ನಡೆಸುವುದೇ ಕಷ್ಟವಾಯಿತು. ವಾದಿರಾಜರ ಇತರ ಕೆಲಸಗಳು, ಒಂದು ಕಂಚಿನ ಪ್ರತಿಮೆ, ಹಾಗೂ ಶ್ರೀಗಂಧದ ಮಂಟಪದ ಕೆಲಸಗಳಿತ್ತು. ಅವೆಲ್ಲ ಪಕ್ಕಕ್ಕೆ ಸರಿದಂತಾಯಿತು. ಹಾಗೂ ಹೀಗೂ

ಮೂರು ವರ್ಷ ಕಳೆಯುವುದರಲ್ಲಿ ಮನೆಯನ್ನೂ ಬಿಡಬೇಕಾಗಿ ಬಂದು, ಈಗಿರುವ ವಾಣಿವಿಲಾಸ ರಸ್ತೆಯ ಮನೆಗೆ ವಾದಿರಾಜರ ಬಿಡಾರ ಬರಲಾಯಿತು. ದೆವ್ವದ ಮನೆ ಎಂದು ಎಷ್ಟೋ ಜನ ಹೆದರಿಸಿದರು. ಈಗಲೂ ಹೆದರಿಸುತ್ತಾರೆ. ವಾದಿರಾಜರು ಯಾವುದನ್ನೂ ಲೆಕ್ಕಿಸಲಿಲ್ಲ. ಇಲ್ಲಿಗೆ ಬಂದ ಮೇಲೆ ಮೊದಲ ಕೆಲಸ ಬಂದಿದ್ದೆಂದರೆ ಹೋಟೆಲ್ ಕಾವೇರಿ ಕಾಂಟಿನೆಂಟಲ್‌ಗೆ ಮಾಡಿದ



ಹೊಯ್ಸಳ ವೇಣುಗೋಪಾಲ

ಕಾವೇರಿ ವಿಗ್ರಹ. ಇದೇ ಇವರ ಮೊದಲ ಸ್ವಂತ ರಚನೆಯಾಯಿತು. ಹೊಯ್ಸಳ ಶೈಲಿಯಲ್ಲಿ ಸ್ವಲ್ಪ ಬಾಗಿ ನಿಂತಿರುವ ಕಾವೇರಿ ವಿಗ್ರಹ ನಾಲ್ಕೂವರೆ ಅಡಿ ಎತ್ತರದ್ದು, ಅಲ್ಲಿಯ ಮೇಲೆ ಸ್ಥಾಪಿಸಿದ್ದಾರೆ. ಕಾವೇರಿ ವಿಗ್ರಹ, ಹಾಗೂ ಒಂದು ವಿಷ್ಣು ವಿಗ್ರಹದ ಕೆಲಸವಿತ್ತು (ನಾಲ್ಕೂವರೆ ಅಡಿ) ಮಹಡಿಯ ಮೇಲೆ ಬಿಡಾರ ಕೆಳಗೆ ಒಂದು ಚಪ್ಪರ ಹಾಕಿ ಕೆಲಸ ಮಾಡುತ್ತಿದ್ದರು.

ಈ ಮನೆಗೆ ಬಂದು ಒಂದೆರಡು ವರ್ಷಗಳಲ್ಲಿ ಎರಡೂ ವಿಗ್ರಹಗಳೂ ಮುಗಿದಿತ್ತು. ಇದರ ಜೊತೆಗೆ ಭಾರತ ಸರ್ಕಾರ 1972 ಸ್ವಾತಂತ್ರ್ಯದ ಬೆಳ್ಳಿಹಬ್ಬ ಆಚರಿಸುವುದರಲ್ಲಿ, ಹಸ್ತಕಲಾಕೃತಿಗಳಿಗಾಗಿ ಬಹುಮಾನ ನೀಡುವುದಾಗಿ ಪ್ರಕಟಿಸಿತು. ವಾದಿರಾಜರ ಬಳಿ ಪ್ರದರ್ಶನಕ್ಕಾಗಲೀ, ಸ್ಪರ್ದೆಗಾಗಲೀ ಕಳುಹಿಸಲು ಯಾವ ವಿಗ್ರಹವೂ ಇರಲಿಲ್ಲ. ನಿಗದಿತ ಸಮಯದಲ್ಲಿ ಮಾಡಲೂ ಸಾಧ್ಯವಿರಲಿಲ್ಲ. ಗೆಳೆಯ ದುಬೆಯವರು ಏನಾದರೂ ಕಳುಹಿಸಿ ಎಂದು ಒತ್ತಾಯ ಮಾಡಿದರು. ಕೊನೆಗೆ ಕಲ್ಕತ್ತಾದ ಶ್ರೀ ನವಲ್‌ಕಿಶೋರ್ ಕೆಜ್ರಿವಾಲರಿಗೆ ಪತ್ರ ಬರೆದು, ತಾವು ಹಿಂದೆ ಅವರಿಗೆ ಮಾಡಿಕೊಟ್ಟಿದ್ದ ಹೊಯ್ಸಳ ಶೈಲಿಯ ವೇಣುಗೋಪಾಲ ವಿಗ್ರಹವನ್ನು ಕಳುಹಿಸಿ ಕೊಡಲು ಕೇಳಿಕೊಂಡರು. ವಾದಿರಾಜರಲ್ಲಿ ಬಹಳ ಅಭಿಮಾನವಿಟ್ಟಿದ್ದ ಕೆಜ್ರಿವಾಲರು ಕೂಡಲೇ ವಿಗ್ರಹವನ್ನು ಕಳುಹಿಸಿಕೊಟ್ಟರು. ಅದರ ಮೇಲೆ ಮತ್ತಷ್ಟು ಕೆಲಸ ಮಾಡಿ, ಬೆಂಗಳೂರಿನ ವಿನ್ಯಾಸ ಕೇಂದ್ರದಲ್ಲಿ ನಡೆಯಲಿದ್ದ ಮೊದಲ ಸುತ್ತಿನ ಆಯ್ಕೆಗಾಗಿ ಕಳುಹಿಸಿದರು. ಇದರ ಜೊತೆಗೆ ಒಂದಡಿಯ ಗಂಧದ ಮರದ ಗಣೇಶ (ಹೊಯ್ಸಳ) ವಿಗ್ರಹವನ್ನು ಕಳುಹಿಸಿದರು. ಮೊದಲ ಸುತ್ತಿನ ಆಯ್ಕೆಯಲ್ಲಿ ಇವರ ಕೃಷ್ಣ ವಿಗ್ರಹ ತಿರಸ್ಕೃತವಾಯಿತು. ತಮ್ಮ ಕೆಲಸದ ಬಗ್ಗೆ ನಂಬಿಕೆಯಿದ್ದ ವಾದಿರಾಜರಿಗೆ ಇದರಲ್ಲೇನೋ ನಡೆದಿರಬೇಕೆನಿಸಿದರೂ, ವ್ಯಥೆಪಟ್ಟುಕೊಂಡು ಸುಮ್ಮನಾದರು. ಆದರೆ ವಿನ್ಯಾಸ ಕೇಂದ್ರದಲ್ಲೇ ಇನ್ನೂ ಕೆಲಸ ಮಾಡುತ್ತಿದ್ದ ದುಬೆಯವರಿಗೆ ಇದರಿಂದ ಬಹಳ ಕೋಪ ಬಂದಿತು. ''ಎಂತಹ ಅನ್ಯಾಯ! ಇಷ್ಟು ಚೆನ್ನಾದ ಕೃತಿಯನ್ನು ಆರಿಸದಿದ್ದರೆ ಕರ್ನಾಟಕಕ್ಕೇ ಅವಮಾನ. ನೀವು ನೇರವಾಗಿ ದೆಹಲಿಗೆ ಕಳುಹಿಸಿ'' ಎಂದು ತಗಾದೆ ಮಾಡಿದರು. ದುಬೆಯವರ ಒತ್ತಾಯಕ್ಕೆ ಮಣಿದು ಮೊದಲು ದೆಹಲಿಗೆ ಕಾಗದ ಬರೆದರು. ಹೀಗೆ ಬೇರೆ ಬೇರೆ ವಿನ್ಯಾಸ

ಕೇಂದ್ರಗಳಲ್ಲೂ ನಡೆಯಿತೆಂಬ ಸುದ್ದಿ ಬಂದು, ನೇರವಾಗಿ ಕೃತಿಗಳನ್ನು ಕಳುಹಿಸಬಹುದೆಂದು ಪತ್ರಿಕೆಗಳಲ್ಲೇ ಪ್ರಕಟವಾಯಿತು. ದುಬೆಯವರಿಗೆ ವಾದಿರಾಜರೆಂದರೆ ಎಷ್ಟು ಅಭಿಮಾನವೆಂದರೆ ವಾದಿರಾಜರನ್ನು ಕರೆದುಕೊಂಡು, ಕೃತಿಯೊಡನೆ ದೆಹಲಿಗೆ ಹೊರಟರು. ಈ ಕೃತಿಗೆ ವಿಶೇಷ ಬಹುಮಾನವೂ ದೊರೆಯಿತು. ಅಲ್ಲಿಂದ ಮುಂದೆ ಯಾವ ಸ್ಪರ್ಧೆಗೂ ಹೋಗಬಾರದೆಂದು ವಾದಿರಾಜರು ತೀರ್ಮಾನಿಸಿದರು.

1974 ಏಪ್ರಿಲ್‌ನಲ್ಲಿ ಅಖಿಲ ಭಾರತ ಶಿಲ್ಪಿಗಳ ಶಿಬಿರದಲ್ಲಿ ಭಾಗವಹಿಸಲು ಅವಕಾಶ ಸಿಕ್ಕಾಗ 'ಶಿಲ್ಪಿ' ಎಂಬ ಕೃತಿಯನ್ನು ವಾದಿರಾಜರು ರಚಿಸಿದರು. ಇದು ಅವರ ಮೊದಲ ಸ್ವತಂತ್ರ ಕೃತಿಯಾಯಿತು. ಇಂದಿಗೂ ಬೆಂಗಳೂರಿನ ಕನ್ನಡ-ಸಂಸ್ಕೃತಿ ಇಲಾಖೆಯಲ್ಲಿ ಈ ವಿಗ್ರಹವಿದೆ. ಶಿಲ್ಪಿ ಮಾಡುವ ಕೆಲಸಗಳು ಆಚಂದ್ರಾರ್ಕವಾಗಿರುತ್ತದೆಯೆಂದು ಸೂಚಿಸುವಂತೆ, ಬಸದಿಕಲ್ಲು, ಶಾಸನಗಳ ಆಕಾರವೊಂದನ್ನು ಕೈಯಲ್ಲಿ ಹಿಡಿದಿರುವ, ಹಾಗೂ ಉಳಿಸುತ್ತಿಗೆ ಹಿಡಿದಿರುವ ಶಿಲ್ಪಿಯ ವಿಗ್ರಹವಿದು.

ಈ ಮಧ್ಯೆ ಮತ್ತೊಂದು ಸಂಕಟದಲ್ಲಿ ಸಿಕ್ಕಿಹಾಕಿಕೊಂಡರು. ಹರಿಹರ್ರವರು ತಮ್ಮ ಕೊನೆಯ ದಿನಗಳಲ್ಲಿ ಜಪಾನಿಗೆ ಕಲ್ಲು ಕಳುಹಿಸುವ ವ್ಯಾಪಾರವನ್ನು ಪ್ರಾರಂಭಿಸಿದ್ದರು. ಅವರ ಹಠಾತ್ ನಿಧನದಿಂದ ಕೆಲವು ಜವಾಬ್ದಾರಿಗಳು ಇವರ ತಲೆಗೇ ಬಿತ್ತು. ವ್ಯವಹಾರಗಳ ಬಗ್ಗೆ ಏನೂ ತಿಳಿಯದ ವಾದಿರಾಜರು ಪಾಲುದಾರರನ್ನೆಲ್ಲ ನಂಬಿ ಮೋಸಹೋದರು. ಇವರ ಬಗ್ಗೆ ತಿಳಿದಿದ್ದ ಜಪಾನೀ ವ್ಯಾಪಾರಿಗಳು, ಇಲ್ಲಿಯ ಜನಗಳೇ ಇವರಿಗೆ ಮೋಸ ಮಾಡಿದ್ದನ್ನು ಕಂಡು ಮರುಗಿದರು. ಅವರ ಪ್ರತಿನಿಧಿಯನ್ನು ಭಾರತದಲ್ಲೇ ಬಿಟ್ಟು, ವಾದಿರಾಜರಿಗೆ ಯಾವ ತೊಂದರೆಯೂ ಆಗದಂತೆ ನೋಡಿಕೊಂಡು, ಸ್ವಲ್ಪ ದಿನಗಳಲ್ಲೇ ವ್ಯಾಪಾರವನ್ನು ಮುಗಿಸಿದರು. ಈ ವ್ಯವಹಾರಗಳಿಂದ ಯಾವ ಆರ್ಥಿಕ ಸಹಾಯವೂ ಇರಲಿಲ್ಲ. ಮೇಲಾಗಿ ಓಡಾಟಗಳಿಂದ, ಕೈಯಿಂದ ಹಣ ಖರ್ಚು ಮಾಡುವುದಲ್ಲದೆ, ಶಿಲ್ಪದ ಕೆಲಸ ನೋಡಲು ಸಮಯವೇ ಇರುತ್ತಿರಲಿಲ್ಲ. ಆದರೆ ಯಾವುದನ್ನೂ ಇದ್ದಕ್ಕಿದ್ದಂತೆ ನಿಲ್ಲಿಸುವಂತಿರಲಿಲ್ಲ. ಹೀಗಾಗಿ

ಜಪಾನಿನವರೇ ಇವರಿಗೆ ತಿಂಗಳಿಗೆ 800 ರೂಪಾಯಿಯಂತೆ ಗೌರವಧನ ಕೊಡುವುದಾಗಿ ತೀರ್ಮಾನಿಸಿದರು. ವ್ಯಾಪಾರವನ್ನು ಪೂರ್ಣ ಮುಚ್ಚುವವರೆಗೂ ಅವಕಾಶವಿತ್ತು, ಸುಮಾರು ಒಂದು ವರ್ಷದ ಕಾಲ.

ಈ ಒಂದು ವರ್ಷದ ಅವಧಿಯಲ್ಲಿ ಮತ್ತೊಂದು ಸಂಕಟ ಎದುರಿಸಬೇಕಾಯಿತು. ಒಂದು ದಿನ ಬೆಳಿಗ್ಗೆ ಏಳುವಾಗಲೇ ಎರಡೂ ಕಾಲುಗಳು ಶಕ್ತಿಯನ್ನು ಕಳೆದುಕೊಂಡಿದ್ದವು. ನನ್ನ ತಮ್ಮ ಡಾ. ಭಾಸ್ಕರ್ ಕೂಡಲೇ ಹೋಗಿ ಪರೀಕ್ಷಿಸಿದ. ಕಾಲುಗಳು ಬರುವುದು ಅನುಮಾನವೆನಿಸಿ, ತನಗೆ ತಿಳಿದಿದ್ದ ಹಿರಿಯ ವೈದ್ಯರನ್ನೆಲ್ಲಾ ಕರೆದುಕೊಂಡು ಬಂದು ತೋರಿಸಿದರೂ, ಅವರೂ ಅದೇ ಅಭಿಪ್ರಾಯಪಟ್ಟರು. ಇವರ ಮಿತ್ರರಾದ ಡಾ. ಹಿರಣ್ಣಯ್ಯ ಕೂಡ ತಜ್ಞರನ್ನೆಲ್ಲಾ ಕರೆದುಕೊಂಡು ಬಂದು ತೋರಿಸಿದರು. ಯಾರೂ ಆಶಾದಾಯಕವಾದ ಉತ್ತರ ಕೊಡಲಿಲ್ಲ. ಆರ್ಥಿಕ ಪರಿಸ್ಥಿತಿ ಹೇಳಿಕೊಳ್ಳು ವಂತಿರಲಿಲ್ಲ, ಸುಬ್ಬಣ್ಣ ಇನ್ನೂ ಓದುತ್ತಿದ್ದ. ಇಂಜಿನಿಯರಿಂಗ್ ಮೂರನೇ ವರ್ಷದಲ್ಲಿ ಓದುತ್ತಿದ್ದ ಅವನಿಗೆ ಓದುವುದಕ್ಕೂ ಸಮಯ ದೊರೆಯದಂತಾಯಿತು. ನನಗಂತೂ ದಿಕ್ಕೇ ತೋಚಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಏನು ಕೆಲಸ ಮಾಡಬಹುದು ? ಮುಂದೆ ಹೇಗೆ ಎಂಬುದೇ ಬೃಹದಾಕಾರದ ಪ್ರಶ್ನೆಯಾಗಿತ್ತು. ವಾದಿರಾಜರು ಮಾತ್ರ ಧೈರ್ಯಗುಂದಲಿಲ್ಲ. ಒಂದೆರಡು ದಿನಗಳಾದ ಮೇಲೆ, ‘‘ಹೋಗಿ ವ್ಯಾಯಾಮ ಶಾಲೆಯ ಶ್ರೀಕಂಠಯ್ಯನವರನ್ನು ಕರೆದುಕೊಂಡು ಬನ್ನಿ’’ ಎಂದರು. ನರಸಿಂಹರಾಜ ಕಾಲೋನಿಯಲ್ಲಿ ದೇಶೀಯ ವ್ಯಾಯಾಮ ಶಾಲೆ ನಡೆಸುತ್ತಿದ್ದ ಶ್ರೀಕಂಠಯ್ಯನವರು ಇಂತಹ ರೋಗಗಳನ್ನು ವಾಸಿ ಮಾಡುವುದರಲ್ಲಿ ತಜ್ಞರು. ಅಭ್ಯಂಜನ ಚಿಕಿತ್ಸೆಗೆ (ಮಾಲಿಶ್) ಹೆಸರಾದವರು. ಜೊತೆಗೆ ವಾದಿರಾಜರ ಬಗ್ಗೆ ಅಪಾರ ಅಭಿಮಾನಿಗಳು. ಕೂಡಲೇ ಬಂದು ಪರೀಕ್ಷಿಸಿ ‘‘ಏನೂ ಹೆದರಬೇಡಿ, ಖಂಡಿತಾ ವಾಸಿಯಾಗುತ್ತದೆ, ಆದರೆ 6 ತಿಂಗಳು ಹಿಡಿಸುತ್ತದೆ. ಯೋಚಿಸಬೇಡಿ, ದೇವರಿದ್ದಾನೆ’’ ಎಂದು ಹೇಳಿದವರೇ ಅಂದಿನಿಂದಲೇ ಚಿಕಿತ್ಸೆ ಪ್ರಾರಂಭಿಸಿದರು. ಆ ತಿಂಗಳಿನಿಂದಲೇ ಜಪಾನಿನವರು ಗೌರವಧನ ಕೊಡಲು ಪ್ರಾರಂಭಿಸಿದ್ದರು. ದೇವರಲ್ಲಿ ಅಪಾರ ನಂಬಿಕೆಯಿದ್ದ ವಾದಿರಾಜರಿಗೆ ಈ

ಸಮಯದಲ್ಲಿ ಸಹಾಯ ಒದಗಿದ್ದು, ಅವರ ನಂಬಿಕೆಯನ್ನು ಮತ್ತಷ್ಟು ಬಲಪಡಿಸಿತು.

ಯಾವಾಗಲೂ ಮಲಗಿರಬೇಕು, ಇಲ್ಲವೇ ಕುಳಿತಿರಬೇಕು. ವಾದಿರಾಜರು ಕೆಲಸ ಮಾಡದಿದ್ದಾಗ, ನಾವು ಏನು ಮಾಡಬಹುದು ? ಆ ಸಮಯದಲ್ಲಿ ರೂಪಶಿಲ್ಪ ಮಾಡುವುದನ್ನು ಅಭ್ಯಾಸ ಮಾಡುತ್ತಿದ್ದ ನನಗೆ ವಾದಿರಾಜರ ಶಿಲ್ಪ ಏಕೆ ಮಾಡಬಾರದೆಂದೆನಿಸಿತು. ಕೇಳಿದ ಕೂಡಲೇ ಒಪ್ಪಿದರು. ಅವರ ಮಂಚದ ಬಳಿಯೇ ಕೆಲಸ ಪ್ರಾರಂಭಿಸಿದೆ. ಕನ್ನಡಿಯಲ್ಲಿ ಮುಖ ನೋಡಿಕೊಂಡು ಸರಿ ತಪ್ಪು ಹೇಳುತ್ತಿದ್ದರು. ಅವರ ತಲೆಯ ಗಾತ್ರವೇ ಶಿಲ್ಪವಾದ್ದರಿಂದ (ಜೇಡಿಮಣ್ಣಿನದು) ಅಲ್ಲಿಯೇ ಬಿಟ್ಟುಹೋಗುತಿದ್ದೆ. ನಾನು ಬೆಳಿಗ್ಗೆ 10 ರಿಂದ 5 ಘಂಟೆಯವರೆಗೆ ಮಾತ್ರ ಅಲ್ಲಿರುತ್ತಿದ್ದೆ. ಹೀಗಾಗಿ ನಾನು ಮನೆಗೆ ಹೋದ ಮೇಲೆ ಶಿಲ್ಪವನ್ನು ತಾವೇ ಮುಂದುವರೆಸುತ್ತಿದ್ದರು. ವ್ಯತ್ಯಾಸಗಳನ್ನೆಲ್ಲಾ ತಿದ್ದುತ್ತಿದ್ದರು. ಎರಡೆರಡು ಕನ್ನಡಿಗಳನ್ನು ಇಟ್ಟುಕೊಂಡು ತಮ್ಮ ಗುಂಗುರು ಕೂದಲನ್ನು ತಲೆಯ ಹಿಂಭಾಗದಲ್ಲಿ ನೋಡಿಕೊಂಡು ಮಾಡಿದ್ದರು. ಅದನ್ನು ನೋಡಿದರೆ ಆಶ್ಚರ್ಯವಾಗುತ್ತಿತ್ತು. ಆ ಶಿಲ್ಪ ಇಂದಿಗೂ ನನ್ನಲ್ಲಿದೆ.

ಹೀಗೆ ಮಲಗಿದ್ದ ಸಮಯದಲ್ಲಿ ಅವರನ್ನು ನೋಡಲು ಬರುವ ಮಿತ್ರರ ಸಂಖ್ಯೆಯೂ ಜಾಸ್ತಿಯಾಗಿತ್ತು. ಸಮಯ ಹೋಗುವುದೇ ತಿಳಿಯುತ್ತಿರಲಿಲ್ಲ. ಸುಬ್ಬಣ್ಣನಿಗೆ ಕಾಲೇಜಿರುತ್ತಿತ್ತು. ಅವನು ಬರುವವರೆಗೂ ನನ್ನ ತಂಗಿ ತಮ್ಮಂದಿರು ಒಬ್ಬರಾದ ಮೇಲೊಬ್ಬರು ಅವರ ಜೊತೆಯಲ್ಲಿರುತ್ತಿದ್ದರು. ನಾಲ್ಕು ತಿಂಗಳು ಕಳೆಯುವುದರೊಳಗಾಗಿ ಸ್ವಲ್ಪ ಎದ್ದು ನಿಲ್ಲುವಂತಾಯಿತು. ಮುಂದೆರಡು ತಿಂಗಳಲ್ಲಿ ಆರಾಮವಾಗಿ ಓಡಾಡಲು ಪ್ರಾರಂಭಿಸಿದರು. ಅವರನ್ನು ಪರೀಕ್ಷಿಸಿದ್ದ ಡಾಕ್ಟರುಗಳಿಗೆ ಶ್ರೀಕಂಠಯ್ಯನವರು ಮಾಡಿದ ಚಿಕಿತ್ಸೆಯಿಂದ ಪವಾಡವನ್ನು ಕಂಡಂತಾಗಿತ್ತು. "ಬರೀ Massage ಮತ್ತು Exercise ಮಾಡಿಸಿದರೆ ಸಾಲದು. ಅಂಗಾಂಗಗಳನ್ನು ತಿಕ್ಕುವಾಗ ಕಾಯಾವಾಚಾ ಮನಸ ರೋಗಿಗೆ ಗುಣವಾಗಲೀ ಎಂದು ಸಂಕಲ್ಪ ಮಾಡಿಕೊಂಡು, ಪ್ರಾರ್ಥನೆ ಮಾಡಿ, ಅದನ್ನೇ ನೆನೆಯುತ್ತ ಚಿಕಿತ್ಸೆ ಮಾಡಿದರೆ ಖಂಡಿತ ವಾಸಿ ಮಾಡಲು ಸಾಧ್ಯ" ಎಂದು ಶ್ರೀಕಂಠಯ್ಯನವರು ಹೇಳುತ್ತಿದ್ದರು. ದೈವವನ್ನೇ ನಂಬಿದ ರೋಗಿ,

ದೈವವನ್ನು ನೆಚ್ಚಿದ ವೈದ್ಯ, ಎಂತಹ ಜೋಡಿ ! ಅದರ ಜೊತೆಗೆ ''ನೀವು ದೇಶದ ಆಸ್ತಿ, ನಿಮ್ಮನ್ನು ಆರೈಕೆ ಮಾಡುವುದು ನನ್ನ ಕರ್ತವ್ಯ'' ಎಂದು ಹೇಳಿ, ಒಂದು ಚಿಕ್ಕಾಸನ್ನೂ ತೆಗೆದುಕೊಳ್ಳದೆ ಶುಶ್ರೂಶೆ ಮಾಡಿದರು. ಅಂತಹ ಮಹಾನ್ ವ್ಯಕ್ತಿತ್ವ ಶ್ರೀಕಂಠಯ್ಯನವರದು. ಮುಂದೆ ವಾದಿರಾಜರಿಗೆ ವಿದೇಶಕ್ಕೆ ಹೊರಡುವ ಅವಕಾಶ ಸಿಕ್ಕಾಗ ಮೊದಲು ಶ್ರೀಕಂಠಯ್ಯನವರಲ್ಲಿ ಹೋಗಿ, ಸುದ್ದಿ ತಿಳಿಸಿ ನಮಸ್ಕರಿಸಿ ಬಂದರು. ಅವರ ಶಾಲೆಗಾಗಿ ಹಲವಾರು ವರ್ಷಗಳ ಮೇಲೆ ಒಂದು ಆಂಜನೇಯ ವಿಗ್ರಹವನ್ನು ಮಾಡಿಕೊಟ್ಟರು.

## ಮತ್ತೆ ಪ್ಲಾಸ್ಟರಿನ ಸಂಶೋಧನೆ

ಕಾಲೇನೋ ಸರಿಹೋಯಿತು. ಇನ್ನೂ ಯಾವ ದೊಡ್ಡ ಕೃತಿಗಳನ್ನು ರಚಿಸಲು ಅವಕಾಶಗಳು ಬಂದಿರಲಿಲ್ಲ. 1975ರಿಂದ 77ರ ವರೆಗೆ ಮತ್ತೆ ಪ್ಲಾಸ್ಟರಿನ ಕೃತಿಗಳನ್ನು ಮಾಡಲು ಪ್ರಾರಂಭಿಸಬೇಕಾಯಿತು. ಸರಿ ಸಣ್ಣ ಸಣ್ಣ ಮೂರ್ತಿಗಳನ್ನು ಮಾಡಿ ಮನೆಯಲ್ಲೇ ಇಟ್ಟು ವ್ಯಾಪಾರ ಮಾಡಲು ಪ್ರಾರಂಭಿಸಿದರು. ಈ ವೇಳೆಗೆ ವಾದಿರಾಜರ ವಾಸದ ಕೆಳಗಿನ ಮನೆ ಖಾಲಿಯಾಯಿತು. ಅವರೇ ಪ್ರಯತ್ನಪಟ್ಟು ಆ ಮನೆಯನ್ನು ನನಗೆ ಕೊಡಿಸಿದರು. ನಾನೂ, ನನ್ನ ತಮ್ಮಂದಿರೂ ಸೇರಿ, ಈ ಮನೆಗೆ ಬಾಡಿಗೆಗೆ ಬಂದೆವು. ಮನೆ ಬಹಳ ದೊಡ್ಡದಾಗಿದೆ. ಮುಂದಿನ ಭಾಗದಲ್ಲೇ ಒಂದು ಸಣ್ಣ ಶೋಕೇಸ್ ಮಾಡಿ, ಕೃಷ್ಣ, ಗಣೇಶ, ಬುದ್ಧನ ತಲೆಗಳು, ಹೀಗೆ ಹಲವಾರು ಕೃತಿಗಳನ್ನು ಮಾಡಿ, ರಬ್ಬರ್‌ನಿಂದ ಅಚ್ಚು ತೆಗೆದು, ಪ್ರತಿಕೃತಿಗಳನ್ನು ಮಾಡಿ ಮಾರಾಟ ಮಾಡುತ್ತಿದ್ದೆವು. ಇದರಿಂದ ಕಲಾವಿದ ಯಾವ ಸಮಯದಲ್ಲೇ ಆಗಲಿ ಕೆಲಸವಿಲ್ಲ ಎಂದು ಕೂಡುವುದಕ್ಕೆ ಬದಲಾಗಿ ಇಂತಹ ಕೆಲಸಗಳನ್ನು ಮಾಡುವುದರಿಂದ, ತಮ್ಮ ಮನಸ್ಸಿಗೆ ಬೇಕಾದ ಕೃತಿಗಳನ್ನು ರಚಿಸುವುದರ ಜೊತೆಗೆ, ಬೇರೊಬ್ಬರಿಂದ ಸಾಲ ಪಡೆಯುವುದನ್ನು ತಪ್ಪಿಸಿ, ಸ್ವತಂತ್ರವಾಗಿ ಬದುಕುವ ಅವಕಾಶವನ್ನು ಕಲ್ಪಿಸಿಕೊಳ್ಳುವುದನ್ನು ಕಲಿತಂತಾಯಿತು. ನನಗಂತೂ ಅವರ ಮನೆಯ ಕೆಳಭಾಗದಲ್ಲಿ ವಾಸಿಸಲು ಅವಕಾಶ ಸಿಕ್ಕಿದ್ದು ನಿಧಿ ಸಿಕ್ಕಂತಾಗಿತ್ತು. ಕಲಾವಿದರೊಬ್ಬರ 'ಜೀವನಕ್ರಮವನ್ನು ಬಹಳ ಹತ್ತಿರದಿಂದ ನೋಡುವ



ಹನುಮಾನ್ - ಚಾಲುಕ್ಯ ಶೈಲಿ

ಅವಕಾಶ ಸಿಕ್ಕಿತು. ಅವರ ಎಲ್ಲ ಕೆಲಸಗಳಲ್ಲೂ ಭಾಗಿಯಾಗುವ, ನಿಜವಾದ ಗುರು-ಶಿಷ್ಯ ಪರಂಪರೆಯ ಭಾಗ್ಯ ನನಗೆ ಸಿಕ್ಕಿತು. ಪ್ಲಾಸ್ಟರ್ ಕೃತಿಗಳನ್ನು ಮಾಡುವುದು ಒಂದು ಸಂಶೋಧನೆಯಾಗಿಯೇ ಬೆಳೆಯಿತು. ನಾಲ್ಕು ವರ್ಷಗಳ ಈ ಸಾಧನೆಯಿಂದ ಜೀವನವೂ ಸಾಗಿದ್ದಲ್ಲದೆ, ಎಂತಹ ಕೃತಿಯನ್ನಾದರೂ ಅಚ್ಚು ತೆಗೆಯುವ ವಿದ್ಯೆ ಕರಗತವಾಯಿತು'.

## ಸ್ವಂತ ರಚನೆಗಳು ಚಾಲುಕ್ಯ ಶೈಲಿಯ ಅಧ್ಯಯನ:

ಬರೀ ಪ್ಲಾಸ್ಟರ್‌ನಲ್ಲೇ ಜನರಿಗಾಗಿ ಕೃತಿ ರಚಿಸುತ್ತಿದ್ದ ವಾದಿರಾಜರಿಗೆ ಸಂಪ್ರದಾಯ ಶೈಲಿಯಲ್ಲಿ ಸ್ವತಂತ್ರ ಕೃತಿಗಳನ್ನು ಮಾಡಬೇಕೆಂಬ ಬಯಕೆ ಮೂಡುತ್ತಿತ್ತು. ಆ ವೇಳೆಗಾಗಲೇ ಹೊಯ್ಸಳ ಶೈಲಿಯ ಕಾವೇರಿ ಮತ್ತು ಶಿಲ್ಪ ಕೃತಿಗಳನ್ನು ರಚಿಸಿ ಸ್ವಲ್ಪ ಅನುಭವ ಪಡೆದಿದ್ದರು. ಅದರ ಬಗ್ಗೆಯೇ ಯಾವಾಗಲೂ ಮಾತನಾಡುತ್ತಿದ್ದರು. ಅದರದೇ ಚಿಂತನೆ ಕೂಡ. ಅವರ ಬಯಕೆ ಕಾರ್ಯರೂಪವಾಗುವುದೆಂದು ಕಾಯುತ್ತಿದ್ದಂತೆಯೇ ಕೆಲವೇ ದಿನಗಳಲ್ಲಿ ರಾಂಚಿಯ "ಉಷಾ ಮಾಟಿಸ್ ಬ್ಲಾಕ್" ನವರಿಗೆ ನಾಲ್ಕು ವಿಗ್ರಹಗಳನ್ನು ಮಾಡುವ ಅವಕಾಶ ಸಿಕ್ಕಿತು. ಉಷಾ ಮಾಟಿಸ್ ಬ್ಲಾಕ್‌ನವರದು ದೊಡ್ಡ ಕಾರ್ಖಾನೆ. ಕಾರ್ಖಾನೆಯ ಆವರಣದಲ್ಲೇ ದೇವಾಲಯಗಳನ್ನು ನಿರ್ಮಿಸುವ ಯೋಜನೆಯಿತ್ತು. ಐದೂವರೆ ಅಡಿ ಎತ್ತರವಿರುವ, ನಿಂತಿರುವ ಭಂಗಿಯ ಗಣೇಶ, ಪಾರ್ವತಿ, ಸುಬ್ರಹ್ಮಣ್ಯ ಮತ್ತು ಆಂಜನೇಯ ವಿಗ್ರಹಗಳು ಒಂದೊಂದು ವಿಗ್ರಹಕ್ಕೂ ಸ್ವತಂತ್ರ ದೇವಾಲಯಗಳು ಎಂತಹ ಅವಕಾಶ, ವಾದಿರಾಜರಿಗೆ ಬಹಳ ಸಂತೋಷವಾಯಿತು.

ಅವಕಾಶ ದೊರೆತೊಡನೆಯೇ ಎಲ್ಲವನ್ನೂ ಚಾಲುಕ್ಯ ಶೈಲಿಯಲ್ಲೇ ಮಾಡುವುದಾಗಿ ತೀರ್ಮಾನ ಮಾಡಿಕೊಂಡರು, ಕಾರಣ ನಮ್ಮ ಮೈಸೂರು ಕಡೆ ಹೊಯ್ಸಳ ಶೈಲಿಯನ್ನೇ ಪ್ರಧಾನವಾಗಿ ಬಳಸುತ್ತಾರೆ. ಬರೀ ಅಲಂಕರಣಕ್ಕಿಂತ ಅಂಗಾಂಗಗಳ ಸೌಂದರ್ಯದ ಕಡೆಗೆ ಹೆಚ್ಚು ಗಮನ ಸೆಳೆಯುವ ಚಾಲುಕ್ಯ ಶೈಲಿ ಹೆಚ್ಚು ಆಕರ್ಷಿಸಿತು. ಸರಿ ಶೈಲಿಯ ಅಧ್ಯಯನ ಪ್ರಾರಂಭ ಮಾಡಿದರು. ಪ್ರಾಚ್ಯ ವಸ್ತು ಸಂಗ್ರಹಾಲಯ, ಸಂಶೋಧನಾಲಯಗಳಿಗೆ ಹೋಗಿ, ಛಾಯಾಚಿತ್ರಗಳನ್ನು ನೋಡಿ ಬಂದರು. ಕೆಲವು ದೇವಾಲಯಗಳನ್ನೂ ನೋಡಿ ಬಂದು ರೇಖಾ ಚಿತ್ರ ಪ್ರಾರಂಭಿಸಿದರು. ಎಲ್ಲವೂ ಮೂಲವಿಗ್ರಹಗಳಾದ್ದರಿಂದ ಸಮಭಂಗಿಯಲ್ಲಿ ನಿಂತ ಪಾರ್ವತಿಯ ಕೈಯಲ್ಲಿರುವ ಆಯುಧಗಳಲ್ಲಿ ಗಣೇಶ ಮತ್ತು ಶಿವಲಿಂಗವನ್ನು ಅಳವಡಿಸಿದರು. ನಿಂತ ಗಣೇಶ ಅದರಲ್ಲೂ ಸಮಭಂಗಿಯಲ್ಲಿರುವುದು ಅಪರೂಪ ಎನ್ನಬಹುದು. ಸುಬ್ರಹ್ಮಣ್ಯನ ವಿಗ್ರಹವಂತೂ, ಒಳ್ಳೆಯ ಸುಂದರ ಮೈಕಟ್ಟಿನ ಪ್ರಾಯದ ಸುಂದರ ರೂಪ,



ಸರ್ ಎಂ. ವಿಶ್ವೇಶ್ವರಯ್ಯ



ಅವಲೋಕಿತೇಶ್ವರ



ಸೂರ್ಯಾ




ಜೀಸಸ್ ಕ್ರಿಸ್ತ - ಟೀಕ್‌ಮರ




ಕಾರ್ತೀಕೇಯ ಚಾಲುಕ್ಯ ಶೈಲಿ



ಚಾಲುಕ್ಯ ಪಾರ್ವತಿ



ಯಶೋಧರಾ - ಪ್ಲಾಸ್ಟರ್ ಮಾಡೆಲ್



ಹಾರಾಡುತ್ತಿರುವ ಗಂಧರ್ವರು

ಜೊತೆಗೆ ನವಿಲು, ಮತ್ತೆ ಮತ್ತೆ ನೋಡಬೇಕೆನ್ನಿಸುವ ಮೈಮಾಟ. ಎಲ್ಲದಕ್ಕಿಂತ ಉತ್ತಮ ಕಲ್ಪನೆ ಆಂಜನೇಯನದು. ತಂಬೂರಿ ಹಿಡಿದು ಸಮಭಂಗಿಯಲ್ಲೇ ನಿಂತು, ರಾಮಧ್ಯಾನ ಮಾಡುತ್ತಿರುವ ಆಂಜನೇಯ ಸ್ವಲ್ಪ ಬಾಯಿ ತೆರೆದಂತಿತ್ತು. ಸುಂದರವಾರ ಮೈಕಟ್ಟು, ಆಂಜನೇಯ ಎಂದರೆ ವಿಕೃತ ಎನ್ನುವ ಕಲ್ಪನೆಗೆ ವಿರುದ್ಧವಾಗಿತ್ತು. ಅಷ್ಟು ಸುಂದರ ರೂಪ, ಜೊತೆಗೆ ಪ್ರಭಾವಳಿಯಲ್ಲಿ ಹೂಬಳ್ಳಿಗಳ ನಡುವೆ ಸಣ್ಣಸಣ್ಣ ಆಂಜನೇಯಗಳು, ಅದೂ ಓಡುತ್ತಿರುವ ಭಂಗಿಯಲ್ಲಿ, ದ್ವಾರಪಾಲಕರಂತೂ ತುಂಬುರು, ನಾರದರು, ರೇಖಾ ಚಿತ್ರಗಳೆಲ್ಲ ಸಿದ್ಧವಾಯಿತು. ಬರೀ ರೇಖಾ ಚಿತ್ರಗಳೇ ತುಂಬ ಆಕರ್ಷಕವಾಗಿತ್ತು. ಕಲ್ಲುಗಳ ವ್ಯವಸ್ಥೆಯೂ ಆಯಿತು. ನನಗಂತೂ ಬಹಳ ಉತ್ಸಾಹ, ಅಷ್ಟು ದೊಡ್ಡ ಕೆಲಸದಲ್ಲಿ ಕೆಲಸ ಮಾಡುವ ಅವಕಾಶ !

ಆ ವೇಳೆಗಾಗಲೇ ನನ್ನ ನಿವಾಸ ಕೂಡ ಇದೇ ಮನೆಗೇ ಬರಲಾಗಿತ್ತಲ್ಲ. ಹೊತ್ತುಗೊತ್ತಿನ ಸಂಕೋಲೆಯಲ್ಲಿಲ್ಲ ಯಾವಾಗಲೆಂದರೆ ಆವಾಗ ಕೆಲಸ ಮಾಡಬಹುದಿತ್ತು. ಕಲ್ಲುಗಳು ಬಂದನಂತರ ಪರಸ್ಥಳ ತೆಗೆಯುವ ಕೆಲಸದಲ್ಲಿ ನಾನು ಕೈಹಾಕಿದೆ. ಪರಸ್ಥಳ ಎಂದರೆ ಶಿಲ್ಪಿಗಳ ಭಾಷೆಯಲ್ಲಿ ಬೇಡದ ಭಾಗ ಎಂದು, ಮೈಸೂರಿನ ಕಡೆ ಈ ಶಬ್ಧ ಬಳಸುತ್ತಾರೆ. ನನಗೂ ಅದರಲ್ಲಿ ಕೆಲಸ ಮಾಡಲು ಅವಕಾಶ ಕೊಟ್ಟಿದ್ದು ನನ್ನ ಭಾಗ್ಯ ಎಂದೆನಿಸುತ್ತಿತ್ತು. ಪಾರ್ವತಿಯ ವಿಗ್ರಹವನ್ನೇ ಮೊದಲು ಪ್ರಾರಂಭಿಸಿದರು. ಅಷ್ಟರಲ್ಲಿ 1981ನೇ ಇಸವಿ ಬಂತು, ಅಂದರೆ ವಾದಿರಾಜರ ಜೀವನದಲ್ಲಿ ಒಂದು ವಿಶೇಷ ವರ್ಷ.

## ಮೊದಲ ವಿದೇಶ ಪ್ರಯಾಣ

1982ರಲ್ಲಿ ಮೊದಲಬಾರಿಗೆ ಬ್ರಿಟನ್ನಿನಲ್ಲಿ 'ಭಾರತದ ಉತ್ಸವ' ನಡೆಸುವ ಸಿದ್ಧತೆಗಳು ನಡೆದಿದ್ದವು. ''ಭಾರತದ ಜೀವಂತ ಕಲೆಗಳ'' ಪ್ರದರ್ಶನಕ್ಕೆ ಬ್ರಿಟನ್ನಿನವರೇ ಆರಿಸಿದ ಒಂಭತ್ತು ಕಲಾವಿದರಲ್ಲಿ, ಸಂಪ್ರದಾಯ ಶಿಲಾಶಿಲ್ಪದ ಕೃತಿ ರಚನೆ ಮತ್ತು ಪ್ರದರ್ಶನಕ್ಕಾಗಿ, ವಾದಿರಾಜರು ಒಬ್ಬರಾಗಿದ್ದರು. ಇದು ನಮ್ಮ ನಾಡಿಗೇ ಹೆಮ್ಮೆ ತಂದ ವಿಷಯ. ಆಯ್ಕೆ ಮಾಡಿದ ಮೇಲೆ ಇವರು ಹೇಗೆ ಕೃತಿಗಳನ್ನು ರಚಿಸುತ್ತಾರೆ, ಕಲೆಯ ಬಗ್ಗೆ ಹೇಗೆ ಮಾತನಾಡಬಲ್ಲರು ಎಂಬುದನ್ನು



ವಿದೇಶದಲ್ಲಿ

ನೋಡಲು ಸ್ವತಃ ಬ್ರಿಟನ್ನಿನ ಹೈಕಮಿಷನರ್ ಅವರ ಪತ್ನಿ Mrs. Sue Grasson (SUE GRASSON) ಎಂಬುವರು ವಾದಿರಾಜರ ಮನೆಗೇ ಬಂದರು. ಇವರು ಮನೆಯ ಮುಂದಿನ ಮಾವಿನ ಮರದ ಕೆಳಗೆ ಕಲ್ಲುಗಳನ್ನು ಹಾಕಿಕೊಂಡು, ಅಲ್ಲೇ ಅಷ್ಟು ಉತ್ತಮವಾದ ಕೆಲಸಗಳನ್ನು ಮಾಡುತ್ತಿದ್ದುದನ್ನು

ೋಡಿ ಆಕೆಗೆ ಬಹಳ ಸಂತೋಷವಾಯಿತು. ಹೆಚ್ಚಿನ ಯಾವ ಸೌಲಭ್ಯಗಳೂ ಇಲ್ಲದೆ, ತಮ್ಮದೇ ಆದ ಪ್ರಯತ್ನದಲ್ಲಿ, ಅಂದರೆ ಯಂತ್ರೋಪಕರಣಗಳಾಗಲೀ ುಸಜ್ಜಿತ ಸ್ಟುಡಿಯೋ ಆಗಲಿ ಯಾವುದೂ ಇಲ್ಲದೇ ಇದ್ದುದು ಆಕೆಗೆ ಆಶ್ಚರ್ಯವನ್ನುಂಟು ಮಾಡಿತ್ತು. ''ಈ ರೀತಿ ಕೆಲಸ ಮಾಡುವದು ನಿಜವಾಗಿಯೂ ಆಕರ್ಷಕವಾಗಿದೆ, ಸರಳವಾಗಿದೆ. ಎಷ್ಟೊಂದು ಸುಂದರ ವಿಗ್ರಹಗಳನ್ನು ಮಾಡುತ್ತೀರಿ ವಾತಾವರಣಕ್ಕೇ ಒಂದು ಶೋಭೆಯಿದೆ, ನಿರಾಭರಣ ಸುಂದರಿಯಂತೆ ಇದೇ ವಾತಾವರಣದಲ್ಲಿ ಫೋಟೋಗಳನ್ನು ತೆಗೆಸಿ ಕಳುಹಿಸಿ, ಪ್ರತಿನಿತ್ಯ ಕೆಲಸ ಮಾಡುವ ರೀತಿಯಲ್ಲೇ ಇರಬೇಕು. ಫೋಟೋಗೋಸ್ಕರ ಏನೂ ಬದಲಾವಣೆ ಮಾಡಬಾರದು, ನಮ್ಮ ಪ್ರಕಟಣೆಗಳಿಗೆ ಬೇಕು'' ಎಂದು ಹೇಳಿ ಹೋದರು. ಮಿತ್ರರಾದ ಖ್ಯಾತ ಛಾಯಾಗ್ರಾಹಕ ಶ್ರೀ ಕೆ.ಜಿ. ಸೋಮಶೇಖರ್ ಬಂದು ಹಲವಾರು ಫೋಟೋಗಳನ್ನು ತೆಗೆದರು. ಆ ಸಮಯದಲ್ಲಿ ಚಾಲುಕ್ಯ ಶೈಲಿಯ ಪಾರ್ವತಿ, ಗಣೇಶ ವಿಗ್ರಹಗಳನ್ನು ಮಾಡುತ್ತಿದ್ದರು.

ಬ್ರಿಟನ್ನಿಗಾಗಿ ಗಟ್ಟಿಕಲ್ಲಿನಲ್ಲಿ ಒಂದು ಸೂರ್ಯವಿಗ್ರಹವನ್ನು ಮಾಡಲು ಹೇಳಿದರು. ಆ ವೇಳೆಗೆ ಪ್ರವಾಸಕ್ಕೆ ಹೊರಡುವ ದಿನಕ್ಕೆ ಕೇವಲ 9 ತಿಂಗಳು ಅವಧಿ ಮಾತ್ರವಿತ್ತು. ಅಷ್ಟರಲ್ಲಿ ಸೂರ್ಯವಿಗ್ರಹವನ್ನು ಮಾಡಬೇಕಿತ್ತು. ಅದಕ್ಕಾಗಿ ಕಲ್ಲನ್ನು ತಮಿಳುನಾಡಿನಿಂದ ತರಿಸಿದರು.

ವಿಗ್ರಹಕ್ಕಾಗಿ ಬಳಸುವ ಗಟ್ಟಿಕಲ್ಲು ಬೇರೆಯೇ ಇರುತ್ತದೆ. ಆ ಕಲ್ಲು ತಮಿಳುನಾಡಿನಲ್ಲಿ ಚೆನ್ನಾಗಿರುವ ಮಟ್ಟದ್ದು ದೊರೆಯುತ್ತದೆ. ವಿಗ್ರಹಕ್ಕಾಗಿ ರೇಖಾ ಚಿತ್ರ ತಯಾರಿಸುವ ಮೊದಲು ನಮ್ಮ ನಾಡಿನಲ್ಲಿ ಲಭ್ಯವಿರುವ ಸೂರ್ಯ ವಿಗ್ರಹಗಳನ್ನೆಲ್ಲಾ ನೋಡಿಬಂದರು. ಛಾಯಾ ಚಿತ್ರಗಳನ್ನು ಸಂಗ್ರಹಿಸಿದರು. ಗಟ್ಟಿಕಲ್ಲಾದ್ದರಿಂದ ಚೋಳ ಶೈಲಿಯೇ ಹೊಂದುವುದೆಂದು, ಅದರಂತೆ ರೇಖಾ ಚಿತ್ರ ರಚಿಸಿದರು. ಇಷ್ಟೆಲ್ಲಾ ತಯಾರಿ ನಡೆಸಿದರೂ, ಆಹ್ವಾನ ಬರುವುದೋ ಇಲ್ಲವೋ ಎಂಬ ಸಂದೇಹ ಕಾಡುತ್ತಿತ್ತು. ಕಾರಣ, ಈ ಪ್ರಸಂಗ ಪ್ರಾರಂಭವಾದ ದಿನದಿಂದ ಈ ಕ್ಷೇತ್ರದಲ್ಲಿದ್ದ ವಾತಾವರಣ ಇವರಿಗೆ

ವಿರುದ್ಧವಾಗಿದ್ದು, ಅಡಚಣೆಗಳು ಬರುತ್ತಲೇ ಇದ್ದವು. "ಕೈ ನಡುಗುತ್ತದೆ, ಅವರೇನು ಕೆಲಸ ಮಾಡುತ್ತಾರೆ" ಎಂಬ ಕುಡಕಿಗಳ ಮಾತನ್ನು ಕೇಳಿ ಪರೀಕ್ಷೆಗೆ ಬಂದವರೂ ಇದ್ದರು. ನಿಜ, ನರಗಳ ದೌರ್ಬಲ್ಯದಿಂದ ಚಿತ್ರ ರಚಿಸುವಾಗ, ಉಳಿ, ಸುತ್ತಿಗೆ ಹಿಡಿಯುವ ಮುನ್ನ ಕೈ ನಡುಗುತ್ತಿತ್ತು. ಆದರೆ ಕೆಲಸ ಪ್ರಾರಂಭಿಸಿದ ಮೇಲೆ ಯಾವ ನಡುಕವೂ ಇರುತ್ತಿರಲಿಲ್ಲ. ಕಲ್ಲಿನಲ್ಲಿ, ರೇಖಾಚಿತ್ರ ಬರೆದಂತೆ ಕೆತ್ತನೆ ಮಾಡುತ್ತಿದ್ದರು. ಅಷ್ಟೊಂದು ಪ್ರಭುತ್ವ ಸಾಧಿಸಿದ್ದರು. ಆದರೂ ವಾದಿರಾಜರನ್ನು ಆತಂಕ ಬಾಧಿಸುತ್ತಿತ್ತು. ಕಲ್ಲುಗಳು ಬರುವ ವೇಳೆಗೆ ಲಿಖಿತ ಆಹ್ವಾನವೂ ಬಂದು ನೆಮ್ಮದಿಯ ಉಸಿರುಬಿಟ್ಟು ಕೆಲಸದ ಕಡೆಗೆ ಗಮನವಿಟ್ಟರು. ಕೆಲಸಕ್ಕೆ ರೆಕ್ಕೆ ಬಂದಂತಾಯಿತು.

## ಗಟ್ಟಿ ಕಲ್ಲುಗಳ ಪ್ರಯೋಗ

ವಾದಿರಾಜರು ಅದುವರೆಗೂ ಗಟ್ಟಿಕಲ್ಲಿನಲ್ಲಿ (Granite) ಕೆಲಸ ಮಾಡಿರಲಿಲ್ಲ. ಎಲ್ಲರೂ ಮಾಡುವಂತೆ ನಮ್ಮ ನಾಡಿನಲ್ಲಿ ದೊರೆಯುವ ಬಳಪದ ಕಲ್ಲನ್ನು ಮಾತ್ರ ಬಳಸುತ್ತಿದ್ದರು. ಹಾಗೆ ನೋಡಲು ಹೋದರೆ ವಾದಿರಾಜರು ಮಾತ್ರ ಎಲ್ಲ ತರಹದ ಗಟ್ಟಿಕಲ್ಲುಗಳಲ್ಲೂ ಕೆಲಸ ಮಾಡಿದ್ದಾರೆ. ಅದೂ ಅವರ ಸಾಹಸ ಪ್ರವೃತ್ತಿಯ ಒಂದು ಮುಖ ಎನ್ನಬಹುದು. ಮಾಮೂಲಿಯಂತೆ ಕಲ್ಲಿನಲ್ಲಿರುವ ಹೆಚ್ಚಿನ ಭಾಗಗಳನ್ನು (ಪರಸ್ಥಳ) ತೆಗೆಯಲು ಒಬ್ಬ ಸಹಾಯಕನನ್ನು ತೆಗೆದುಕೊಂಡರು. ಅವನು ಬಳಸುವ ಚೀರ್ಣಗಳು, ಅವನ್ನು ಬಳಸುವ ರೀತಿ, ಸುತ್ತಿಗೆ ಹಿಡಿಯುವುದೂ, ಎಲ್ಲವನ್ನೂ ಗಮನಿಸುತ್ತಾ, ತಾವು ಇದುವರೆಗೆ ಮಾಡದಿದ್ದ ಗಟ್ಟಿಕಲ್ಲಿನಲ್ಲೂ ಸುಲಭವಾಗಿ ಕೆಲಸ ಮಾಡುವುದನ್ನು ಕಲಿತರು. ಮೃದು ಕಲ್ಲುಗಳಲ್ಲಿ ಪಟ್ಟೆ ಚೀರ್ಣ ಬಳಸಿ, ಮರವನ್ನು ಕೆತ್ತುವಂತೆ ಕೆತ್ತಬಹುದು. ಗಟ್ಟಿ ಕಲ್ಲಿನಲ್ಲಿ ಕೆತ್ತಬೇಕಾದರೆ ಬರೀ ಮೊನೆ ಉಳಿಯನ್ನು ಮಾತ್ರ ಬಳಸಬೇಕಾಗುತ್ತದೆ. ಆದ್ದರಿಂದಲೇ ಎಷ್ಟು ಸೂಕ್ಷ್ಮವಾದ ಕೆಲಸವನ್ನಾಗಲೀ ಸ್ವಲ್ಪ ಸ್ವಲ್ಪವೇ ಹೊಡೆದು ತೆಗೆಯಬೇಕು. ಇದರಲ್ಲಿ ಮಾಡುವ ವಿಧಾನ ಮೃದು ಕಲ್ಲಿನಲ್ಲಿ ಮಾಡುವ ವಿಧಾನಕ್ಕಿಂತ ಬಹಳ ಭಿನ್ನವಾಗಿರುತ್ತದೆ, ಅಂದರೆ ಕಣಕಣಗಳನ್ನು ಮೊನೆಯಿಂದ ತೆಗೆಯಬೇಕು,

ಅಥವಾ ಎಬ್ಬಿಸಬೇಕು. ಕೆಲಸ ಮಾಡುತ್ತ ಬಂದಂತೆ, ಮೊನೆ ಉಳಿಗಳು ಬಹಳ ಬೇಗ ಮೊಂಡಾಗುತ್ತದೆ, ಮೊಂಡಾದರೆ ಕೆಲಸ ಮಾಡಲಾಗುವುದಿಲ್ಲ. ಆಗಾಗ ಉಳಿಗಳನ್ನು ತಟ್ಟಿಕೊಳ್ಳಬೇಕು. ಈ ರೀತಿಯ ಕೆಲಸ ಮಾಡುವಾಗ ದಿನಕ್ಕೆ 25 ಉಳಿಗಳಾದರೂ ಬೇಕು. ಸರಿ ಮನೆಯಲ್ಲೇ ಉಳಿತಟ್ಟಲು ಕುಲುಮೆ ಸಿದ್ಧವಾಯಿತು. ಈ ಎಲ್ಲ ತಯಾರಿಗಳನ್ನೂ ನೋಡುವುದಕ್ಕೇ ಸಂತೋಷವಾಗುತ್ತಿತ್ತು. ಒಂದು ಹಬ್ಬದಂತಿತ್ತು. ವಾದಿರಾಜರು ನಂಬಿದ ದೈವ ಯಾವ ಕ್ಷಣದಲ್ಲೂ ಕೈಬಿಡನೆಂಬುದಕ್ಕೆ ಮತ್ತೊಂದು ನಿದರ್ಶನ ಸಿಕ್ಕಿತು.

## ಪಚ್ಚೆಕಲ್ಲಿನ ಜಿನ ವಿಗ್ರಹ: ( Quartz )

ಯೋಗಾಯೋಗವೆಂಬಂತೆ, ಮಹಾತ್ಮಾಗಾಂಧಿ ರಸ್ತೆಯಲ್ಲಿರುವ ಬಾರ್ಟನ್ ಕೋರ್ಟ್ ಮಾಲೀಕರಾದ ಶ್ರೀ ಮೆಹ್ತಾ ಅವರು, ತಮ್ಮ ಬಳಿ ಒಂದು ಪಚ್ಚೆಕಲ್ಲಿರುವುದಾಗಿಯೂ, ಅದರಲ್ಲಿ ಒಂದು ಜಿನ ವಿಗ್ರಹವನ್ನು ಮಾಡಿಕೊಡಬೇಕೆಂದೂ ಕೇಳಿಕೊಂಡು ಬಂದರು. ಆ ಕಲ್ಲು ಅವರ ಬಳಿ ಬಹಳ ವರ್ಷಗಳಿಂದಲೂ ಇದ್ದಿತಂತೆ. ಅದರಲ್ಲಿ ಕೆಲಸ ಮಾಡಲು ಯಾರು ಸಿದ್ಧರಿರಲಿಲ್ಲ. ಅದರಲ್ಲಿ ಕೆಲಸ ಮಾಡಲು ಬೇರೆ ಚೀರ್ಣಗಳೇ ಬೇಕು, ಅಷ್ಟು ಗಟ್ಟಿ ಆ ಚೀರ್ಣಗಳನ್ನು ಕೊಡಿಸಿದರೆ ತಾವು ಮಾಡುವುದಾಗಿಯೂ, ಚೀರ್ಣಗಳು ಸಿಕ್ಕರೆ ಸಾಕು, ತಮಗೆ ಸಂಭಾವನೆ ಕೂಡ ಬೇಡವೆಂದು ವಾದಿರಾಜರು ಹೇಳಿದರು. ಸರಿ, ಅದರ ಬಗ್ಗೆ ಹುಡುಕಾಟ ಪ್ರಾರಂಭವಾಯಿತು. Tungston carbide Tips ಇರುವ ಚೀರ್ಣಗಳಿಂದ ಮಾತ್ರ ಸಾಧ್ಯವೆಂದೂ, ಅದನ್ನು ಒಂದು, ಎರಡು ಚೀರ್ಣಗಳನ್ನು ಮಾಡುವುದಿಲ್ಲವೆಂದೂ ತಿಳಿಯಿತು. ಮತ್ತೆ ಚೀರ್ಣದ ಬೆಲೆ ಕೂಡ ಬಹಳ ದುಬಾರಿ. ಮೆಹ್ತಾರವರು ನಾಲ್ಕು ಚೀರ್ಣಗಳನ್ನು ಕೊಡಿಸಿದ್ದಲ್ಲದೆ, ಅವುಗಳನ್ನು ಆಗಾಗ ಚೂಪು ಮಾಡಿಕೊಳ್ಳಲು Grinding Wheel ಕೂಡ ಕೊಡಿಸಿದರು. ಮೆಹ್ತಾರವರ ಕೆಲಸವನ್ನು ಬಹಳ ಶ್ರದ್ಧೆಯಿಂದ ಮಾಡಿಕೊಟ್ಟರು, ಅವರಿಗೂ ಬಹಳ ಸಂತೋಷವಾಯಿತು. ಮತ್ತೆ ಅಪರೂಪದ ಚೀರ್ಣಗಳು ವಾದಿರಾಜರಿಗೆ ಸಿಕ್ಕಿದವು. ಸೂರ್ಯನ ವಿಗ್ರಹ ಮಾಡಲು, ಲಂಡನ್ನಿಗೆ ತೆಗೆದುಕೊಂಡು ಹೋಗಲು ವಾದಿರಾಜರಿಗೆ ಇಂತಹ ಚೀರ್ಣಗಳು ಸಿಕ್ಕಿದ್ದರಿಂದ ಬಹಳ ಸಂತೋಷವಾಗಿತ್ತು.

ಸೂರ್ಯನ ವಿಗ್ರಹದಲ್ಲಿ ಸ್ವಲ್ಪವೇ ಕೆಲಸವನ್ನು ಉಳಿಸಿಕೊಂಡು, ಅಲ್ಲಿಯ ನಾಲ್ಕು ತಿಂಗಳ ಪ್ರವಾಸದಲ್ಲಿ ಪ್ರಾತ್ಯಕ್ಷಿಕತೆಗಾಗಿ ಒಂದು 2'x1'x1' ಅಳತೆಯ ಬರೀ ಗಟ್ಟಿ ಕಲ್ಲನ್ನೂ ಹಾಕಿಕೊಂಡರು. ವಾದಿರಾಜರು ಸ್ವತಃ ಕೆಲಸ ಮಾಡುವುದಿಲ್ಲ, ಕೈನಡುಗುತ್ತದೆ, ಇಂಗ್ಲೆಂಡಿಗೆ ಹೋಗಿ ಏನು ಮಾಡುತ್ತಾರೆ ಎಂದು ಕುಹಕಿಗಳು ಆಡಿಕೊಂಡರು. ನಡುಗುವ ಕೈಯಲ್ಲೇ ಯಾರು ಮಾಡದಿದ್ದಷ್ಟು ರೇಖಾ ಚಿತ್ರಗಳನ್ನು ಮಾಡಿದ್ದಾರೆ, ಯಾರು ಬಳಸದಿದ್ದಷ್ಟು ವಿವಿಧ ಕಲ್ಲುಗಳನ್ನು ಬಳಸಿ, ಅಂದರೆ ಪಚ್ಚೆಕಲ್ಲು, ಗಟ್ಟಿಕಲ್ಲು, ಕೆಂಪುಗಲ್ಲು, ಸ್ಲೇಟಿನ ತರಹದ ಕಲ್ಲು, ಇವುಗಳನ್ನೆಲ್ಲಾ ಬಳಸಿ ನೂರಾರು ಸುಂದರ ವಿಗ್ರಹಗಳನ್ನು ಮಾಡಿದ್ದಾರೆ. ಹೀಗಿರುವಾಗ ಕೈ ನಡುಗುವುದು ಎಂತಹ ದೌರ್ಬಲ್ಯ ? ಆಡುವ ಜನಕ್ಕೇನು ಹೇಳಬೇಕು ? ವಾದಿರಾಜರ ಪುಣ್ಯಕ್ಕೆ ಸೂರ್ಯನ ವಿಗ್ರಹ ಮತ್ತು ಬರೀ ಕಲ್ಲನ್ನು ಪ್ಯಾಕ್ ಮಾಡುವ ಸಮಯಕ್ಕೆ ಸರಿಯಾಗಿ ಈ ಮಾತುಗಳನ್ನಾಡಿದ ಕುಹಕಿಗಳು ಬಂದು ನೋಡಿಕೊಂಡೂ ಹೋದರು. ಇಂಗ್ಲೆಂಡಿಗೆ ಹೋಗಿ ಬರೀ ಕಲ್ಲಲ್ಲೂ ಸುಂದರ ವಿಗ್ರಹವನ್ನು ಮಾಡಿ, ತೋರಿಸಿ, ವಾಪಸ್ಸು ತಂದಾಗ ಮಾತ್ರ ನೋಡಲು ಬರಲಿಲ್ಲ.

## ವಿದೇಶ ಪ್ರವಾಸದ ಅನುಭವಗಳು

1982ರ ಮೇ 22 ರಿಂದ ಸೆಪ್ಟೆಂಬರ್ ಕೊನೆಯವರೆಗೂ ಕೈಗೊಂಡ ಈ ಪ್ರವಾಸದಲ್ಲಿ ಲಂಡನ್ನಿನ 5 ಪ್ರಮುಖ ನಗರಗಳಲ್ಲಿ ಭಾರತದ ಕಲಾವಿದರ ಪ್ರದರ್ಶನ, ಸ್ಥಳದಲ್ಲಿ ಕೃತಿ ರಚನೆ ಕಾರ್ಯಕ್ರಮಗಳು, ಒಂದೊಂದು ಕಡೆಯೂ ಎರಡು ವಾರಗಳಂತೆ ನಡೆದವು. ಇವರ ಪ್ರದರ್ಶನಗಳಿಗೆ ಬಂದ ಜನಸಂಖ್ಯೆ ಅಪಾರವಾಗಿದ್ದು ಬಹಳ ಮೆಚ್ಚುಗೆ ಪಡೆದವು. ಅಲ್ಲಿಯ ಪತ್ರಿಕೆಗಳು ಕೂಡ ಬಹಳ ಹೊಗಳಿ ಸಾರಿದವು. ಈ ಸಂದರ್ಭದಲ್ಲಿ Royal College of Arts ನಲ್ಲಿ ಓದಿದ ಒಂದು ಕಲಾವಿದರ ತಂಡ ಭಾರತೀಯ ಕಲಾವಿದರನ್ನು ಕಾಣಲು ಬಂದರು. ಇವರನ್ನೆಲ್ಲ ಕಂಡು ಮಾತನಾಡಿಸಿದ್ದಲ್ಲದೆ, ಅಲ್ಲಿಯ ಖ್ಯಾತ ಶಿಲ್ಪಿ ನೇಥರ್‌ಡೇವಿಡ್ ಎಂಬ (ಅವರೇ ಸ್ವತಃ ಬಂದಿದ್ದರು) ಶಿಲ್ಪಿಯ Studio ನಲ್ಲಿ ಎಂದು ಔತಣ ಕೂಟಕ್ಕೆ ಕರೆದರು. ಜೊತೆಗೆ ಒಂದು ''ವಿಚಾರ ವಿನಿಮಯ''

ಕಾರ್ಯಕ್ರಮವನ್ನೂ ಇಟ್ಟುಕೊಂಡರು. ಭಾರತೀಯ ತಂಡದಲ್ಲಿದ್ದವರೆಂದರೆ, ಶಿಲಾಶಿಲ್ಪ, ಕಂಚುಶಿಲ್ಪ, ಟೆರ್ರಾಕೋಟ, ಬೆಂಡಿನಲ್ಲಿ ವಿಗ್ರಹಗಳನ್ನು ಮಾಡುವುದು, ಬಸ್ತರ್ ಜನಗಳ ಜನಪದ ಶಿಲ್ಪ, ಶಾಲುಗಳನ್ನು ನೇಯುವುದು, ಸುಂದರ ಕಸೂತಿ ಕೆಲಸ, ಉತ್ತರದ ಸಂಪ್ರದಾಯ ಚಿತ್ರಕಲೆ ಮತ್ತು ಕಲಂಕಾರಿ, ಈ ಕಲೆಗಳಲ್ಲಿ ಪ್ರಾವೀಣ್ಯ ಪಡೆದವರು. ಭಾರತೀಯ ತಂಡದಲ್ಲಿ ಹಿರಿಯರೂ, ಹತ್ತಾರು ಕಲೆಗಳನ್ನು ತಿಳಿದುಕೊಂಡವರೂ, ಅದರ ಬಗ್ಗೆ ಅನುಭವ ಪೂರ್ಣವಾಗಿ ಮಾತನಾಡಬಲ್ಲವರೂ ಆಗಿದ್ದ ವಾದಿರಾಜರೇ ವಿಚಾರ ವಿನಿಮಯ ಕಾರ್ಯದಲ್ಲಿ ಹೆಚ್ಚು ಮಾತನಾಡಿದರು. ಭಾರತೀಯ ಕಲೆ, ಕುಶಲಕಲೆ ಇವುಗಳ ಬಗ್ಗೆ ಭಾರತದಲ್ಲೂ ನಡೆಯುತ್ತಿರುವ ಘರ್ಷಣೆ, ಸಂಪ್ರದಾಯ ಕಲೆಗಳ ದೀರ್ಘ ಅವಧಿಯ ಬೇರೂರಿಕೆ ಇವುಗಳ ಬಗ್ಗೆಯೇ ಮಾತುಕತೆಗಳಾದವು. ಅದರ ಸಾರಾಂಶವನ್ನು ಹೀಗೆ ಹೇಳಬಹುದು.

## ಭಾರತೀಯ ಕಲೆಗಳ ನೆಲೆ

ಇಂದು ಇಷ್ಟೆಲ್ಲಾ ಹೊಸ ಕಲೆಯ ಪ್ರವಾಹದ ಅಲೆಗಳು ನಡೆಯುತ್ತಿದ್ದರೂ, ಸಂಪ್ರದಾಯ ಕಲೆಗಳು ಯಾವ ಪ್ರಭಾವಕ್ಕೂ ಒಳಗಾಗದೆ, ಎಲ್ಲ ಹೊಸ ಅಲೆಗಳನ್ನೂ ನುಂಗಿ, ತನ್ನದೇ ಆದ ಹೊಸ ಶೈಲಿಗಳಲ್ಲಿ ಮೂಡಿಬರುತ್ತಿವೆ. ಸಂಪ್ರದಾಯ ಕಲೆಯೆಂದರೆ ಕೇವಲ ಅನುಕರಣೆಯಿಂದ ಕೂಡಿದೆ, ಅದರಲ್ಲಿ ಯಾವ ಕ್ರಿಯಾಶೀಲತೆಯೂ ಇಲ್ಲ, ಹೊಸತನವೇ ಇಲ್ಲ, ಅದು ಕಲೆಯೇ ಅಲ್ಲ, ಕುಶಲಕಲೆ ಎನ್ನಬಹುದು ಎಂಬ ವಿವಾದಕ್ಕೆ ಒಳಗಾಗಿದೆ. ವಾಸ್ತವದಲ್ಲಿ ಸಂಪ್ರದಾಯಕಲೆ ಒಂದು ಜೀವಂತ ಕಲೆ. ಜನಾಂಗದ ಬೇಡಿಕೆಗಳ ಪೂರೈಕೆಗಾಗಿ ಬೆಳೆದು ಬಂದ ಮಹಾವೃಕ್ಷ. ಮಾನವನ ಆಸೆ, ಆಕಾಂಕ್ಷೆ, ಭಯ, ಭೀತಿ, ಪ್ರಕೃತಿಯಿಂದ ಅವನು ಎದುರಿಸುತ್ತಿದ್ದ ಹಲವಾರು ಪೀಡೆಗಳು, ಇವುಗಳ ನಿವಾರಣೆಗಾಗಿ ಅವನೇ ಮಾಡಿಕೊಂಡ ಹಲವಾರು ನಂಬಿಕೆಗಳು ಇವೇ ದೀರ್ಘಕಾಲದವರೆಗೆ ಬೆಳೆದು ಬರುತ್ತಾ ಚಿರನೂತನತೆಯನ್ನು ಪಡೆಯಲು ಕಾರಣ. ಕಾಲದಿಂದ ಕಾಲಕ್ಕೆ ಮಾನವನ ಬೇಡಿಕೆಗಳು ಬದಲಾಗುತ್ತಿದ್ದು, ಬೇಡಿಕೆಗಳಿಗನುಸಾರವಾಗಿ ಸಂಪ್ರದಾಯ ಕಲೆಗಳೂ ಬೆಳೆಯುತ್ತಲೇ ಬಂದಿದೆ,

ಎಂದ ಮೇಲೆ ಕ್ರಿಯಾಶೀಲತೆಯಿಲ್ಲ ಎಂದು ಹೇಗೆ ಹೇಳಬಹುದು ? ಮೊದಲು ಧಾರ್ಮಿಕ ವಿಧಿಗಳಿಗಾಗಿ ಬಳಕೆಯಾಗುತ್ತಿದ್ದ ಕಲೆ ಇಂದಿನ ಆಧುನಿಕ ಸಮಾಜದ ಅಲಂಕರಣಕ್ಕೂ ಬಳಸಲ್ಪಡುತ್ತಿದೆ. ಕೇವಲ ಬಳಕೆಯ ರೀತಿಯಲ್ಲೂ ಬದಲಾವಣೆಯಾಗಬೇಕಾದರೂ ಕ್ರಿಯಾಶೀಲತೆಯಿರಲೇಬೇಕು. ಕ್ರಿಯಾಶೀಲತೆಯಿದೆ ಎಂದಮೇಲೆ ಅದು ಕಲೆಯಾಗಲೀ, ಕುಶಲಕಲೆಯಾಗಲೀ ಅದು ಜೀವಂತವಾದ ಕಲೆ ಮತ್ತು ಜನಾಂಗವನ್ನು ತಲುಪುತ್ತಿರುವ ಕಲೆಯೆಂದಾಯಿತು.

ಇಂತಹ ಕಲೆ ಸಮಾಜದ ಒಂದು ಅಂಗವೇ ಆಗಿರುವುದರಿಂದ ಸಂಪ್ರದಾಯ ಕಲಾವಿದ ಜನ ಜೀವನದ ಒಂದು ಅವಿಭಾಜ್ಯ ಅಂಗವಾಗಿದ್ದಾನೆ ಮತ್ತು ಜನಾಂಗದ ಆಸೆ, ಆಕಾಂಕ್ಷೆಗಳ ಪೂರೈಕೆಗೆ ಸಾಧನವಾಗಿದ್ದಾನೆ, ಜನಾಂಗದ ಬಯಕೆಯ ಮಿಡಿತಕ್ಕೆ ಕಲಾವಿದ ಸ್ಪಂದಿಸಿದಾಗಲೇ ಅವರಿಗೆ ಬೇಕಾದ ಕೃತಿ ರಚಿಸಲು ಸಾಧ್ಯ. ಹೀಗಾಗಿ ಇಂದಿನ ನವ್ಯ ಕಲಾವಿದರಂತೆ ಜನಸಾಮಾನ್ಯರನ್ನು ತಲುಪಲು ಹೋರಾಟ ನಡೆಸಬೇಕಾಗಿಲ್ಲ. ಅವರ ಮಧ್ಯದಲ್ಲೇ ಇದ್ದು, ಅವರ ಅಭಿರುಚಿ, ಸಂಸ್ಕೃತಿಗಳ ಪ್ರತೀಕವಾಗಿದ್ದಾನೆ. ಜನಾಂಗಕ್ಕೆ ತನ್ನನ್ನು ಅರ್ಪಿಸಿಕೊಂಡಿದ್ದಾನೆ. ಒಬ್ಬ ಕಲಾವಿದನಿಂದ ಮತ್ತೊಬ್ಬ ಕಲಾವಿದನ ಕೆಲಸಗಳಲ್ಲಿ ಭಿನ್ನತೆ ಇದ್ದೇ ಇರುತ್ತದೆ. ಅದನ್ನು ಕುಶಲತೆ ನಿಪುಣತೆಯೆನ್ನಬಹುದು. ಸಂಪ್ರದಾಯ ಕಲಾವಿದರೆಲ್ಲರೂ ಜನಾಂಗದ ಪ್ರತಿನಿಧಿಗಳಾದರೂ, ಅವರವರ ಕುಶಲತೆ ಬೇರೆಯಾಗಿದ್ದು ಹೊಸ ಕೃತಿಗಳ ನಿರ್ಮಾಣವಾದರೂ, ಎಲ್ಲರೂ ಅನುಕರಣ ಮಾಡುವವರು ಎಂಬ ಭಾವನೆ ಬಂದಿದೆ. ಕೃತಿ ರಚನೆಗೆ ಬೇಕಾದ ಕಲ್ಪನೆಯನ್ನು ಜನಮನದಲ್ಲಿ ಮೂಡಿಸಲು ಸಂಪ್ರದಾಯ ಕಲಾವಿದ ಹೆಣಗಬೇಕಾಗಿಲ್ಲ. ಜನಮನಗಳಲ್ಲಿರುವ ಸಂಕೇತಗಳನ್ನೇ ಬಳಸಿ ಹೊಸ ಹೊಸ ರೀತಿಗಳಲ್ಲಿ ಕೃತಿ ರಚಿಸುವ ಸ್ವಾತಂತ್ರ್ಯ ಸಂಪ್ರದಾಯ ಕಲಾವಿದನಿಗೆ ಇದ್ದೇ ಇದೆ. ಅನೂಚಾನವಾಗಿ ನಡೆದು ಬಂದಿರುವ ಈ ಮಾರ್ಗವನ್ನೇ ಬದಲಿಸಬೇಕೆನ್ನುವ ಮಾತು ಸರಿಯಲ್ಲ. ಇಂತಹ ಸಂಪ್ರದಾಯದ ಹಾದಿಯಲ್ಲಿ ನಡೆಯುವ ಯಾವ ಕಲಾವಿದರೇ ಆಗಲೀ, ಸಾಧನೆಯಿಂದಲೇ ಎಲ್ಲವನ್ನೂ ಗಳಿಸಿ, ಜನತೆಯನ್ನು ಸುಲಭವಾಗಿ ತಲುಪಬಲ್ಲ,

ಆಧುನಿಕ ಶಿಲ್ಪ ಒಬ್ಬೊಬ್ಬರಿಗೆ ಒಂದೊಂದು ರೀತಿ ಕಾಣಬಹುದು. ಕಲಾವಿದ ಏನು ಹೇಳುತ್ತಾನೆ ಎನ್ನುವ ಕಡೆಗೆ ಜನಾಂಗಕ್ಕೆ ಗಮನವಿರುವುದಿಲ್ಲ. ಜನಾಂಗಕ್ಕೆ ಸಂದೇಶ ತಲುಪಿಸುವುದು ಕಲಾವಿದನ ಹೊಣೆ. ಯಾವಾಗ ತನ್ನ ಕಲ್ಪನೆ ಅಥವಾ ಸಂದೇಶವನ್ನು ಜನತೆಗೆ ಮುಟ್ಟಿಸುವಲ್ಲಿ ಕಲಾವಿದ ಅಸಹಾಯಕನಾಗುತ್ತಾನೆ, ಆಗ ಅವನ ಕಲೆ ಯಾರಿಗಾಗಿ ? ಸಮಾಜದಲ್ಲೇ ಬದುಕಬೇಕಾದ ಕಲಾವಿದ ತನ್ನ ಕಲೆಯನ್ನು ತಾನೇ ಇಟ್ಟುಕೊಂಡು ಬದುಕುವುದಾದರೂ ಹೇಗೆ ? ಈ ಸಮಸ್ಯೆಗಳಿಗೆ ಕಾಲವೇ ಉತ್ತರ ಕೊಡಬೇಕು. ''ಕಲೆಗಾಗಿ ಕಲೆ, ಜನರಿಗಾಗಿ ಕಲೆಯಲ್ಲ, ಜನ ಕಲಾವಿದನ ಕಲ್ಪನೆಯನ್ನು ಅರಿಯುವ ಮಟ್ಟ ಮುಟ್ಟಬೇಕು, ಜನರನ್ನು ಕಲಾವಿದ ತನ್ನ ಕಲ್ಪನೆಯ ಮಟ್ಟಕ್ಕೆ ಒಯ್ಯಬೇಕು'' ಎಂಬ ಕೂಗು ಬಂದು, ಅದರಲ್ಲೂ ಯಾವ ಉತ್ತೇಜನವನ್ನು ಕಾಣದೆ, ಈಗ ಕಲಾವಿದ ಜನರನ್ನು ತಲುಪಬೇಕು, ಅವರಿಗಾಗಿ ಕೃತಿ ರಚಿಸಬೇಕು ಎನ್ನುವ ದಿಕ್ಕಿಗೆ ಮತ್ತೆ ಹೋಗುತ್ತಿದ್ದಾನೆ. ಯಾವಾಗ ಜನಸಾಮಾನ್ಯರಿಗಾಗಿಯೇ ಕಲೆ ಎಂದಮೇಲೆ ಅದು ಎಲ್ಲರಿಗೂ ಸುಲಭವಾಗಿ ಸಿಗುವಂತಿರಬೇಕಲ್ಲವೆ ? ಸುಲಭವಾಗಿ ಸಿಗಬೇಕಾದರೆ ಹತ್ತಾರು ಒಂದೇ ರೀತಿ ಮಾಡಿದಾಗ, ಸುಲಭವಾಗಿಯೂ ಸಿಗುತ್ತದೆ ಮತ್ತೆ ಇದು ಕುಶಲಕಲೆಯೂ ಹೌದು. ಈ ಮಾರ್ಗವನ್ನು ಅನುಸರಿಸುತ್ತ ಸಂಪ್ರದಾಯ ಕಲಾವಿದ ಹೊಸ ಹೊಸ ಕೃತಿಗಳನ್ನು ರಚಿಸುತ್ತ ಸಾಧ್ಯವಾದಲ್ಲಿ ಜನಸಾಮಾನ್ಯರಿಗೂ ಸಿಗುವಂತೆ ಮಾಡುತ್ತ, ನಾಡಿನ ಮೂಲೆಮೂಲೆಗೂ ತಲುಪಿದ್ದಾನೆಂದ ಮೇಲೆ ಇವನ ಸಾಮರ್ಥ್ಯ ಎಂತಹುದು ? ಕಲ್ಪನೆಯ ಬೆಲೆಯೇನು ? ಹೀಗಾಗಿ ಸಂಪ್ರದಾಯ ಕಲೆಗಳು ಎಂದೆಂದೂ ಜೀವಂತವಾಗಿರುವ ಚೈತನ್ಯ ಪೂರ್ಣ ಕಲೆ. ಇದೇ ವಾದಿರಾಜರು ಅಲ್ಲೂ, ಇಲ್ಲೂ ಹೇಳಿದ ಸಂದೇಶಗಳು. ತಮ್ಮ ಬದುಕಿಗೆ ಕಂಡುಕೊಂಡ ಅರ್ಥ ಇಂಗ್ಲೆಂಡಿನ ಶಿಲ್ಪಿಗಳಿಗೆ ವಾದಿರಾಜರ ಯೋಚನಾ ಸರಣಿ ಬಹಳ ಹಿಡಿಸಿತು. ಅಲ್ಲಿಯ ಕೂಟಕ್ಕೆ ಹೊರಡುವ ಮೊದಲು ತಮಗೆ ಇಂಗ್ಲಿಷ್ ಭಾಷೆ ಬರದು, ಮಾತನಾಡುವುದು ಕಷ್ಟ ಎಂದಿದ್ದರು. ಇವರ ಮಾತಿನ ಮೋಡಿಗೆ, ವಿಚಾರ ಸರಣಿಗೆ ಬೆರಗಾಗಿ ನೀವು ನಮ್ಮ ಪ್ರಶ್ನೆಗಳಿಗೆ ಅರ್ಥವಾಗುವ ರೀತಿಯಲ್ಲಿ ಭಾಷೆಯನ್ನು ಬಳಸಿ ಉತ್ತರಿಸಿದಿರ್‍ರಿ. ಇದಕ್ಕಿಂತ ಭಾಷಾ ಪಾಂಡಿತ್ಯ

ಏಕೆ ಬೇಕು? ಕಲಾವಿದನಿಗೆ ಇದಕ್ಕಿಂತ ಇನ್ನೇನು ಬೇಕು ಎಂದು ಇವರನ್ನು ಮೆಚ್ಚಿಕೊಂಡರು. ಇವರ ಸರಳತೆ, ನೇರವಾದ ಮಾತುಗಳು, ಮಿಗಿಲಾಗಿ ಸಂಪ್ರದಾಯ ಶೈಲಿಯಲ್ಲಿ ಕಾಪಾಡಿಕೊಂಡು ಬಂದಿರುವ ಶುದ್ಧತೆ, ಪರಿಪಕ್ವತೆ ಅವರ ಮನಸ್ಸನ್ನು ಗೆದ್ದಿತು. ಇವೇ ಒಬ್ಬ ಪರಿಪಕ್ವ ಹಿಂದೂ ಕಲಾವಿದನನ್ನಾಗಿ ಮಾಡಿದೆಯೆಂದೂ ಹೊಗಳಿದರು.

ಹೀಗೆ ಇಂಗ್ಲೆಂಡಿನ ರಾಜಧಾನಿಯಿಂದ ಕಾರ್ಡಿಸ್‌ನ ಚಾಪ್ಟರ್ ಗ್ಯಾಲರಿ (Chapter Gallery in Cardiff) ಗ್ಲಾಸ್ಗೋವಿನ ಥರ್ಡ್ ಐ ಸೆಂಟರ್ (Third eye centre in Glasgo) ಬ್ರೆಡ್ ಫರ್ಡ್‌ನ ಕಾರ್ಟ್‌ರೈಟ್ ಹಾಲ್ (Cartwright Hall in Bradford) ಶೇಷೀಲ್ಡ್‌ನ ಮ್ಯಾಪಿನ್ ಗ್ಯಾಲರಿ (Mappin Gallery at Sheffield) ಎಂಬ ಇತರ ನಾಲ್ಕು ಕಡೆಗಳಲ್ಲೂ ಪ್ರದರ್ಶನ, ಕೃತಿ ರಚನಾ ಕಾರ್ಯ, ಅಲ್ಲಿಯ ಕಲಾವಿದರೊಡನೆ ಭೇಟಿ, ವಿಚಾರ ವಿನಿಮಯಗಳು ನಡೆದು, ಇವರ ಪ್ರದರ್ಶನಗಳು ಬಹಳ ಮೆಚ್ಚುಗೆ ಪಡೆದವು.

ಸ್ಕಾಟ್‌ಲೆಂಡಿನಲ್ಲಿ ನಡೆದ ಪ್ರದರ್ಶನದಲ್ಲಿ ಅಲ್ಲಿಯ 80 ವರ್ಷದ ಶಿಲ್ಪಿ Mr. Benno Schotz ಎಂಬುವರು ಎರಡೆರಡು ಬಾರಿ ಬಂದು ಪ್ರದರ್ಶನವನ್ನು ನೋಡಿ ಮೆಚ್ಚಿ, ವಾದಿರಾಜರ ಜೊತೆಯಲ್ಲಿ ಫೋಟೋ ತೆಗೆಸಿಕೊಂಡರು. ಸ್ಟೆಲ್ಲಾ ಕ್ರೆಮಿರಿಜ್ ಮತ್ತು ಕಪಿಲಾ ವಾತ್ಸಾಯನ ಅವರುಗಳು ಬಂದು ವಾದಿರಾಜರ ಆಲ್ಬಂನಲ್ಲಿದ್ದ ವಿಷ್ಣುವಿನ ಫೋಟೋ ನೋಡಿ "ವಾಹ್ ಹೊಯ್ಸಳ ಶಿಲ್ಪಿ ಮತ್ತೆ ಹುಟ್ಟಿ ಬಂದಿದ್ದಾನೆ" ಎಂದಾಗ ವಾದಿರಾಜರ ಹೃದಯ ಅರಳಿತ್ತು.

ಒಂದು ಕಡೆ ಇವರ ಪ್ರದರ್ಶನ ನಡೆಯುತ್ತಿದ್ದ ಪಕ್ಕದಲ್ಲಿಯೇ ಒಂದು ಆಧುನಿಕ ಶಿಲ್ಪದ ಪ್ರದರ್ಶನ ಕೂಡ ನಡೆದಿತ್ತು. ವಾದಿರಾಜರು ಪ್ರದರ್ಶನ ನೋಡಲು ಹೋದಾಗ ಅಲ್ಲಿಯ ಕಲಾವಿದರು ಅತ್ಯಂತ ಭಕ್ತಿ ಗೌರವಗಳಿಂದ ಕರೆದು ಕೂರಿಸಿ ಮಾತನಾಡಿಸಿದರಂತೆ. ಆದರೆ ತಮ್ಮ ಕಲಾಕೃತಿಗಳನ್ನು ತೋರಿಸಲು ಸಂಕೋಚಗೊಂಡರಂತೆ. "ಇದೆಲ್ಲ ಏನೂ ಇಲ್ಲ. ಕೇವಲ ಹಾರಾಟ ನಿಮ್ಮ ಮುಂದೆ ನಾವು ಬಹಳ ಕಿರಿಯರು. ಈ ಪ್ರದರ್ಶನ ನೋಡುವ ಅಗತ್ಯವೇ

ನಿಮಗಿಲ್ಲ'' ಎಂದಾಗ ಹಾಗೇಕೆ ಹೇಳುವಿರಿ ? ಈಗಿನ ಹೊಸ ಅಲೆ ಯಾವ ದಿಕ್ಕಿನಲ್ಲಿದೆಯೆಂದಾದರೂ ನಾವು ತಿಳಿಯಬೇಕಲ್ಲ'' ಎಂದರಂತೆ.

''ಎಷ್ಟೇ ಸತ್ವಶಾಲಿಯಾಗಿದ್ದರೂ ಯಾಕೋ ಹೊಸತನವನ್ನು ಬೇಗ ಕಳೆದುಕೊಳ್ಳುತ್ತದೆ. ಮುಂದೇನು ಎಂಬ ಪ್ರಶ್ನೆ ಬೃಹದಾಕಾರವಾಗಿ ಕಾಡುತ್ತಿದೆ. ಇಂತಹ ಚಮತ್ಕಾರಗಳಿಗೆ ಕೊನೆಯೆಲ್ಲಿ ? ದೀರ್ಘಕಾಲದ ಸಾಧನೆಯಿಲ್ಲದೆ ಮಾಡುವ ಯಾವ ಕಲೆಯಾದರೂ ಅಶಾಶ್ವತ. ಯಾವ ದೇಶವಾಗಲೀ, ಯಾವ ಪ್ರಕಾರದ ಕಲೆಯಾಗಲೀ ಸಾಧನೆಯ ಬಲದಿಂದ ಮಾತ್ರ ಏನನ್ನಾದರೂ ಮಾಡಬಹುದು. ಸಾಧನೆಯ ಬಲವಿಲ್ಲದ ಕಲೆ ಹೆಚ್ಚುಕಾಲ ಬಾಳಲು ಸಾಧ್ಯವಿಲ್ಲ'' ಎಂದು ತಮ್ಮ ದುಗುಡವನ್ನು ಹೇಳಿಕೊಂಡರು. ಅವರ ಮಾತುಗಳು ಎಲ್ಲ ಕಾಲಕ್ಕೂ ಅನ್ವಯಿಸುವಂತಹುದು ಅವರ ನೋವು ವಾದಿರಾಜರಿಗೆ ಆಶ್ಚರ್ಯ ತಂದಿತು. ತಾವು ಮಾಡಿದ್ದೇ ಸರಿ ಎನ್ನುವ ಮನೋಭಾವ ಹೊಂದದೆ ಎಷ್ಟು ನೇರವಾಗಿ ತಮ್ಮ ಅಸಾಮರ್ಥ್ಯವನ್ನು ತೋಡಿಕೊಂಡರು !

ಅನಂತರ ಭಾರತೀಯ ಕಲಾವಿದರೆಲ್ಲ ವಿಶ್ವ ವಿಖ್ಯಾತ ಶಿಲ್ಪಿ ಹೆನ್ರಿಮೂರ್‌ನ ಸ್ಟುಡಿಯೋಗೆ ಭೇಟಿಯಿತ್ತರು. ಇವರು ಹೋದಾಗ ಹೆನ್ರಿಮೂರ್ ಇನ್ನೂ ಬಂದಿರಲಿಲ್ಲ. ಸ್ಟುಡಿಯೋವನ್ನೆಲ್ಲ ಸುತ್ತಿ ಬರುವ ವೇಳೆಗೆ ಬಂದಿದ್ದರು. ಭಾರತೀಯ ಕಲಾವಿದರನ್ನೆಲ್ಲ ಆತ್ಮೀಯತೆಯಿಂದ ಮಾತನಾಡಿಸಿದರಂತೆ ವಾದಿರಾಜರ ಆಲ್ಬಂ ನೋಡಿ, ಮೆಚ್ಚಿ, ತಮ್ಮ ಹಸ್ತಾಕ್ಷರವಿರುವ ತಮ್ಮ ಶಿಲ್ಪದ ಒಂದು ಪುಸ್ತಕ ಕೊಟ್ಟಿದ್ದಾರೆ.

## ಬಯಸಿದ ಬದುಕು ಸುಂದರ

ಹೀಗೆ ಬ್ರಿಟನ್ನಿನ ಪ್ರವಾಸ ಕಾಲದಲ್ಲಿ ಹಲವಾರು ಕಡೆ ಸುತ್ತಿ ಹಲವಾರು ಕಲಾವಿದರನ್ನು ಭೇಟಿ ಮಾಡಿದ ವಾದಿರಾಜರಿಗೆ ತಮ್ಮ ಸಂಪ್ರದಾಯ ಕಲೆಯ ಬಗ್ಗೆ ಇನ್ನಷ್ಟು ಅಭಿಮಾನ ಮೂಡಿತು. ಸಂಪ್ರದಾಯ ಕಲೆಯನ್ನೇ ಆಧಾರವಾಗಿಟ್ಟುಕೊಂಡಿರುವ ತಾವು ಆಧುನಿಕ ಪ್ರಪಂಚದಲ್ಲಿ ಯಾವ ಸ್ಥಾನವನ್ನು ಪಡೆಯಬಹುದು ಎಂಬ ಅನುಮಾನಗಳು ಬರುತ್ತಿದ್ದರೂ, ಈ ಪ್ರವಾಸದಲ್ಲಿ ಪಡೆದ ಅನುಭವದಿಂದ ತಮ್ಮ ನೆಲೆ ಗಟ್ಟಿಯಾಗಿದೆ, ತಮ್ಮ ಹೆಜ್ಜೆ ಸರಿಯಾದ

ಮಾರ್ಗದಲ್ಲಿದೆ, ಸಂಪ್ರದಾಯ ಕಲೆ ಎಂದು ಹೀಗಳೆಯುವ ಜನರೆದುರಿಗೆ ತಲೆಭಾಗ ಬೇಕಾಗಿಲ್ಲ ಎಂದು ತಿಳಿಯುವಂತಾಯಿತು. ಮತ್ತೆ ಸಂಪ್ರದಾಯ ಕಲೆಯೇ ಆದರೂ ದೀರ್ಘಕಾಲದ ಸಾಧನೆಯಿಂದ ನಿತ್ಯನೂತನತೆಯನ್ನು ಪಡೆಯುವುದರಲ್ಲಿ ಸಂದೇಹವೇ ಇಲ್ಲವೆಂಬ ಸತ್ಯವನ್ನು ಕಂಡುಕೊಂಡರು. ಭಾರತಕ್ಕಿಂತ ಹೊರನಾಡಿನವರೇ ಸಂಪ್ರದಾಯ ಕಲೆಗಳಿಗೇ ಬೆಲೆ ಕೊಡುತ್ತಾರೆಂಬುದು, ಭಾರತೀಯ ಕಲೆಗಳ ಬಗ್ಗೆ ಅವರೇ ಹೆಚ್ಚು ತಿಳಿದುಕೊಂಡಿದ್ದಾರೆಂದು ಅನುಭವಕ್ಕೆ ಬಂದ ಮೇಲೆ ಮತ್ತೂ ನೆಮ್ಮದಿಯಾಯಿತು. ಇಷ್ಟೆಲ್ಲ ಹೊಸ ಅನುಭವಗಳನ್ನು ನೀಡಿದ ಪ್ರವಾಸವನ್ನು ಮುಗಿಸಿ ಬಂದ ವಾದಿರಾಜರಲ್ಲಿ ಹೊಸ ಚೈತನ್ಯ ಮೂಡಿತ್ತು.

ಐದು ತಿಂಗಳ ಪ್ರವಾಸದಿಂದ ಪಡೆದ ಸ್ಫೂರ್ತಿಯಿಂದ ಚಾಲುಕ್ಯ ಶೈಲಿಯಲ್ಲಿ ತಾವೇ ರೂಪಿಸಿದ ವಿಗ್ರಹಗಳನ್ನು ಸುಂದರವಾಗಿ ಕೆತ್ತಿದರು. ಸುಮಾರು ಎರಡು ವರ್ಷಗಳ ಕಾಲ ಈ ಕೆಲಸವೇ ಆಯಿತು. ಮಧ್ಯಮಧ್ಯೆ ಹಲವಾರು ಬೇಡಿಕೆಗಳು ಬಂದು ವಾದಿರಾಜರಿಗೆ ಬಿಡುವೇ ದೊರೆಯುತ್ತಿರಲಿಲ್ಲ ಎಂದರೆ ಆಶ್ಚರ್ಯವಾದೀತು. ''ಸರ್ಕಾರಿ ಕೆಲಸಬಿಟ್ಟು ಮಣ್ಣು ತಿನ್ನಬೇಕು'' ಎಂದವರು ಹುಬ್ಬೇರಿಸುವಂತಾಯಿತು. ಕೆಲಸಗಳು ತಾವಾಗಿ ಹುಡುಕಿಕೊಂಡು ಬರುತ್ತಿದ್ದವು. ಅದರ ಬೆನ್ನ ಹಿಡಿದು ವಾದಿರಾಜರು ಎಂದೂ ಹೋದವರಲ್ಲ ಶಿಷ್ಯರ ಸಂಖ್ಯೆಯೂ ಬೆಳೆಯಿತು. ವಾದಿರಾಜರ ನಿವಾಸ ಒಂದು ಪುಟ್ಟ ಗುರುಕುಲವಾಯಿತು. All India Handicrafts Board ನಿಂದ ಮತ್ತೆ ಒಂದು ವರ್ಷದ ತರಬೇತಿ ಯೋಜನೆ ನಡೆಸಲು ಅವಕಾಶ ಸಿಕ್ಕಿತು. ಅಶೋಕ ಗುಡಿಗಾರ, ಜಿ.ಎಲ್. ಭಟ್, ವೆಂಕಟರಮಣಭಟ್, ಜಯ, ರಮೇಶ್, ಜಿನದತ್ತ ಮತ್ತಿತರರು ತರಬೇತಿಯ ಯೋಜನೆ ಸೇರಿದರು. ಮನೆಯ ಮುಂದಿನ ಮಾವಿನ ಮರದ ಕೆಳಗೆ ಕುಳಿತು ಎಲ್ಲರೂ ಕೆಲಸ ಮಾಡುವುದನ್ನು ನೋಡುವುದಕ್ಕೆ ಒಂದು ಸಂತೋಷವಾಗುತ್ತಿತ್ತು. ಹೊಸ ಶಿಷ್ಯ ವೃಂದದ ಜೊತೆಗೆ ಬೇರೆಬೇರೆಯ ರೀತಿಯ ಕಲ್ಲುಗಳನ್ನು ಬಳಸುವ ಅವಕಾಶಗಳೂ ದೊರೆತವು. ಕಾರ್ಕಳದಲ್ಲಿರುವ ಜಪಾನಿನವರು ಎರಡು ಅವಲೋಕಿತೇಶ್ವರ ವಿಗ್ರಹಗಳನ್ನು ಕಾರ್ಕಳದ ಕಲ್ಲಿನಲ್ಲಿಯೇ ಮಾಡಿಕೊಡಲು ಕೇಳಿದರು. ಕಲ್ಲು ಗಟ್ಟಿಯಾಗಿದ್ದುದರಿಂದ

ಜಪಾನಿನವರೇ ಕೆಲವು ಚೀರ್ಣಗಳನ್ನು ಕೊಟ್ಟರು. ಬಾಗಲಕೋಟೆಯ ಕಲ್ಲಿನಲ್ಲಿ ಕೆಜ್ರಿವಾಲರಿಗಾಗಿ ಒಂದು ಹೊಯ್ಸಳ ವಿಷ್ಣು (ಮತ್ತೆ) ಪ್ರಾರಂಭಿಸಿದರು. ಬಾದಾಮಿಯ ಕೆಂಪು ಹರಳುಗಲ್ಲಿನಲ್ಲಿ ಒಂದು ಸುಂದರ ಮದನಿಕೆಯೊಂದನ್ನು ಮಾಡಿದರು. ಹೀಗೆ ಬೇರೆ ಬೇರೆ ಕಲ್ಲುಗಳಲ್ಲಿ ಕೆಲಸ ಮಾಡುವ ಅವಕಾಶ, ಹೊಸ ಜನಗಳ ಪರಿಚಯ, ಬಯಸಿ ಕಲಿಯಲು ಬಂದ ಪ್ರತಿಭಾವಂತ ಶಿಷ್ಯರು, ಎಲ್ಲವೂ ವಾದಿರಾಜರಿಗೆ ಬಹಳ ಸಂತೋಷ ತೃಪ್ತಿಗಳನ್ನು ತಂದಿತ್ತು, ಬಯಸಿದ ಬದುಕು ಹಸನಾಗಿತ್ತು.

1985ರ ವೇಳೆಗೆ ಭಾರತ ಉತ್ಸವದಲ್ಲಿ ಭೇಟಿಯಾಗಿದ್ದ College of Arts ನ ಕಲಾವಿದರ ತಂಡ, ತಾವು ಪ್ರತಿವರ್ಷದ ಬೇಸಿಗೆಯಲ್ಲಿ ನಡೆಸುವ ಪ್ರತಿಷ್ಠಿತ "Art in action" ಉತ್ಸವಕ್ಕೆ ವಾದಿರಾಜರನ್ನು ಆಹ್ವಾನಿಸಿದರು. ಈ ಆಹ್ವಾನ ವಾದಿರಾಜರಿಗೆ ಅನಿರೀಕ್ಷಿತವಾಗಿತ್ತು. 85ರ ಜುಲೈನ ಮೂರನೇ ವಾರ ಲಂಡನ್ನಿನಲ್ಲಿ ಪ್ರದರ್ಶನಕ್ಕಾಗಿ ಕಲಾಕೃತಿಗಳನ್ನು ನಿರ್ಮಿಸಿಕೊಂಡು ಹೊರಡಬೇಕಿತ್ತು. ಬೇರೆ ಬೇರೆ ಶೈಲಿಗಳ, ಬೇರೆ ಬೇರೆ ರೀತಿಯ ಕಲ್ಲುಗಳಲ್ಲಿ 12 ಕೃತಿಗಳನ್ನು ರಚಿಸಿ Art in action ಉತ್ಸವಕ್ಕೆ ಹೊರಟರು.

## ಆರ್ಟ್ ಇನ್ ಆ್ಯಕ್ಷನ್ ಉತ್ಸವ

ಜುಲೈ ಮೂರನೇ ವಾರದಲ್ಲಿ ಪ್ರತಿವರ್ಷ ನಡೆಯುವ ಈ ಉತ್ಸವ ಲಂಡನ್ನಿನ ಜನಪ್ರಿಯ ಕಲಾ ಉತ್ಸವ. ನಾಲ್ಕೇ ದಿನಗಳು ನಡೆಯುವ ಈ ಉತ್ಸವಕ್ಕೆ ಪ್ರಪಂಚದಾದ್ಯಂತ ಇರುವ ಸಂಪ್ರದಾಯ ಕಲಾವಿದರನ್ನು ಮಾತ್ರ ಆಹ್ವಾನಿಸುತ್ತಾರೆ. ವಿಶ್ವದ ನಾನಾ ಕಡೆಗಳಲ್ಲೂ ಇರುವ ಸಂಪ್ರದಾಯ ಶೈಲಿಗಳನ್ನು ತಿಳಿಯುವ ಪ್ರಯತ್ನವೇ ಈ ಉತ್ಸವದ ಮೂಲ ಉದ್ದೇಶ. Oxford shire ನ ಬಳಿಯಿರುವ Water perry House ಎಂಬ ವಿಶಾಲವಾದ ತೋಟದಲ್ಲಿ ಈ ಉತ್ಸವ ನಡೆಯುತ್ತದೆ. ವಿಶ್ವದ ಹಲವಾರು ಕಲಾವಿದರನ್ನು ಭೇಟಿಯಾಗುವ ಸುಯೋಗ ವಾದಿರಾಜರಿಗೆ ದೊರಕಿತ್ತು. ಈ ಭಾರಿಯ ಭೇಟಿಯಲ್ಲಿ ಮೂರು ವಾರಗಳಿದ್ದ ವಾದಿರಾಜರು Art-in-action ಸಭೆಯ

ಸದಸ್ಯರ ಮನಸ್ಸನ್ನೆಲ್ಲಾ ಗೆದ್ದರು ಮತ್ತು ನಮ್ಮ ನಾಡಿನ ಹಲವಾರು ಸಂಪ್ರದಾಯ ಕಲಾವಿದರನ್ನು ಅವರಿಗೆ ಪರಿಚಯಿಸುವ ಹೊಣೆಹೊತ್ತು ನಮ್ಮ ಹಲವಾರು ಕಲಾವಿದರನ್ನು ಪ್ರತಿ ವರ್ಷದ ಉತ್ಸವಕ್ಕೆ ಕರೆದೊಯ್ದಿದ್ದರು. ಕಂಚು ಶಿಲ್ಪಿ ಶ್ರೀ ದಾಂಭಿಕೇಶ್ವರ, ಸಂಪ್ರದಾಯದ ಚಿಕಣಿ ಚಿತ್ರಕಾರ ಶ್ರೀ ವಿಜಯ ಹಾಗರ ಗುಂಡಿಗಿ, ಸಂಪ್ರದಾಯ ನೂಲುವ ಮನೆತನದ ಶ್ರೀ ಶ್ರೀನಿವಾಸ್, ಕಲಂಕಾರಿ ಕಲಾವಿದ ಶ್ರೀ ವೇಣುಗೋಪಾಲ್ ಮತ್ತು ನನ್ನನ್ನೂ ತಮ್ಮ ಬದಲಿಗೆ ಎರಡು ಬಾರಿ ಉತ್ಸವದಲ್ಲಿ ಪಾಲ್ಗೊಳ್ಳಲು ಕಳುಹಿಸಿದ್ದರೆಂದರೆ, ಅವರ ಹೃದಯ ವೈಶಾಲ್ಯವನ್ನು ಅರಿಯಬಹುದು. 1985, 86, 87ರ ನಂತರ ಎರಡು ವರ್ಷ ಬಿಟ್ಟು ಮತ್ತೆ 1990ರಲ್ಲಿ Art-in-action ಗೆ ಹೋದರು.

## ಬೃಹತ್ ಶಿಲ್ಪ ನಟರಾಜ

ಈ ಮಧ್ಯೆ 7 ಅಡಿ ಎತ್ತರದ ನಟರಾಜನ ವಿಗ್ರಹ ಮಾಡಲು ಒಂದು ಅವಕಾಶ ದೊರೆಯಿತು. ಇದನ್ನು ಸಂಡೂರಿನ ಶ್ರೀ ಎಂ.ವೈ. ಘೋರ್ಪಡೆಯವರು ಮಾಡಿಸಿದರು. ಅವರ ಪರಿಚಯವಾಗಿ ಈಗಾಗಲೇ 4 ವರ್ಷಗಳೇ ಕಳೆದಿದ್ದವು. ಅವರಿಗಾಗಿ ಬಾಲಚಿದಂಬರ, ದತ್ತಾತ್ರೇಯ, ಸುಬ್ರಹ್ಮಣ್ಯಸ್ವಾಮಿಯ ಕೃತಿಗಳನ್ನು ರಚಿಸಿದ್ದಲ್ಲದೆ, ಸಂಡೂರಿನ ಮೂವರು ತರುಣ ಶಿಲ್ಪಿಗಳಿಗೆ ತರಬೇತಿ ಸಹ ನೀಡಿದ್ದರು. ಜೊತೆಗೆ ಈ ಶಿಷ್ಯರನ್ನೊಳಗೊಂಡ ಒಂದು ಕುಶಲಕಲಾ ಕೇಂದ್ರ ಕೂಡ ಸಂಡೂರಿನಲ್ಲಿ ಪ್ರಾರಂಭವಾಯಿತು. ಬಾಲಚಿದಂಬರ ವಿಗ್ರಹ ವಾದಿರಾಜರದೇ ಸ್ವಂತ ರಚನೆ. ಆ ವಿಗ್ರಹವನ್ನು ಕಂಚಿ ಕಾಮಕೋಟಿ ಪೀಠದ ಹಿರಿಯ ಶ್ರೀ ಶ್ರೀಗಳು ತಮ್ಮ ಬಳಿ ಸ್ವಲ್ಪದಿನ ಇಟ್ಟುಕೊಂಡಿದ್ದರೆಂದು ತಿಳಿದ ವಾದಿರಾಜರು ಬಹಳ ಹಿಗ್ಗಿದ್ದರು. ಇದೇ ಶಿಲ್ಪಿಯಿಂದ ಮಾಡಿಸಬೇಕೆಂಬ ಶ್ರೀಶ್ರೀಗಳ ಆದೇಶದ ಮೇರೆಗೆ ಶ್ರೀ ಘೋರ್ಪಡೆಯವರು ವಾದಿರಾಜರನ್ನು ಕರೆದು ಇಷ್ಟೆಲ್ಲಾ ಕೆಲಸಗಳನ್ನು ಕೊಟ್ಟಿದ್ದರು. ಜೊತೆಗೆ ಒಂದೆರಡು ಬಾರಿ ಕಂಚಿ ಶ್ರೀ ಶ್ರೀಗಳ ದರ್ಶನಭಾಗ್ಯವೂ ವಾದಿರಾಜರಿಗೆ ದೊರೆತಾಗ ತಮ್ಮ ಜನ್ಮ ಸಾರ್ಥಕವಾಯಿತೆಂದು ತೃಪ್ತಿ ಪಟ್ಟುಕೊಂಡರು. ಮತ್ತೆ ಶ್ರೀ ಶ್ರೀಗಳ ಆದೇಶದಂತೆ 6 ಅಡಿಯ ನಟರಾಜ ವಿಗ್ರಹ ಮಾಡುವ ಅವಕಾಶ ಸಿಕ್ಕಾಗ ವಾದಿರಾಜರಿಗೆ

ಸ್ವರ್ಗವೇ ಸಿಕ್ಕಿದಷ್ಟು ಖುಷಿಯಾಗಿತ್ತು. ಬಹಳ ವರ್ಷಗಳಿಂದ ದೊಡ್ಡ ಶಿಲ್ಪವೊಂದನ್ನು ರಚಿಸಬೇಕೆಂಬ ಆಸೆ, ಈ ರೂಪದಲ್ಲಿ ಮೈ ತಾಳಿತ್ತು. ಅಷ್ಟು ದೊಡ್ಡ ವಿಗ್ರಹ ಮಾಡಲು ಕಾರ್ಕಳದ ಗಟ್ಟಿ ಕಲ್ಲೇ ಸರಿ ಎಂದು ಯೋಚಿಸಿ, ಕಾರ್ಕಳದಲ್ಲಿ ಬಂಡೆ ತೆಗೆಸಿದಾಗ 6 ಅಡಿಗೆ ಬದಲಾಗಿ 7 ಅಡಿಯ ಬಂಡೆಯೇ ಸಿಕ್ಕಿತ್ತು. ಆವೇಳೆಗಾಗಲೇ ಅದಕ್ಕೆ ಬೇಕಾದ ರೇಖಾಚಿತ್ರ ತಯಾರಿಸಿದ್ದರು. 7 ಅಡಿಯ ನಟರಾಜನ ವಿಗ್ರಹಕ್ಕೆ ಸರಿಹೊಂದುವಂತೆ 6 ಅಡಿಯ ಶಿವಗಾಮಿಯ ವಿಗ್ರಹದ ತಯಾರಿಯೂ ನಡೆದಿತ್ತು. ಬಂಡೆ ತೆಗೆದ ಜಾಗದಲ್ಲೇ ಹೆಚ್ಚಿನ ಭಾಗಗಳನ್ನು ತೆಗೆದು, ಸ್ಥೂಲವಾಗಿ ಆಕಾರವನ್ನು ರೂಪಿಸಿ, ಅಲ್ಲಿಂದ ನೇರವಾಗಿ ಸಂಡೂರಿಗೇ ತೆಗೆದುಕೊಂಡು ಹೋದರು. ಅಲ್ಲಿಯೇ, ದೇವಾಲಯವನ್ನೂ ಕಟ್ಟುವುದರ ಜೊತೆಗೆ ಈ ವಿಗ್ರಹಗಳ ಕೆತ್ತನೆಯೂ ನಡೆಯಿತು. ವಾದಿರಾಜರು ಬೆಂಗಳೂರಿನಿಂದ ಸಂಡೂರಿಗೆ ಹೋಗಿ, ಮೂರು ನಾಲ್ಕು ದಿನಗಳಿದ್ದು ಕೆಲಸ ಮಾಡಿಸಿ ಬರುತ್ತಿದ್ದರು.

ಅಷ್ಟು ಎತ್ತರದ ವಿಗ್ರಹಗಳಲ್ಲಿ ಕೆಲಸ ಮಾಡಲು ಸುಮಾರು ಜನ ಶಿಲ್ಪಿಗಳನ್ನು ತಮಿಳುನಾಡಿನಿಂದ ಕರೆಸಿದ್ದರು. ನಟರಾಜ, ಶಿವಕಾಮಿ ವಿಗ್ರಹಗಳಿಗೆ ಸೂಕ್ತವಾದ ದೇವಾಲಯವನ್ನೂ ಕಟ್ಟುವುದೆಂದು ತೀರ್ಮಾನವಾಗಿತ್ತಷ್ಟೆ. ದೇವಾಲಯದ ನಕ್ಷೆಯನ್ನು ವಾದಿರಾಜರೇ ಸಿದ್ಧಪಡಿಸಿದರು. ವಾಸ್ತುಶಿಲ್ಪದ ಇಂಜಿನಿಯರಿಂಗ್ ಪದವಿ ಪಡೆದಿದ್ದ ಅವರ ಮಗ ಸುಬ್ಬಣ್ಣ ಈ ನಕ್ಷೆ ತಯಾರಿಸುವಾಗಲಿಂದ ಹಿಡಿದು, ದೇವಾಲಯದ ಕೆಲಸ ನಡೆಯುವಾಗಲೂ ಸಹಾಯ ಮಾಡಿದ್ದಾನೆ. ಜೊತೆಗೆ ದೇವಾಲಯದ ಮೇಸ್ತ್ರಿಯಾಗಿ ಖ್ಯಾತವಾಸ್ತುಶಿಲ್ಪಿ ವೈದ್ಯಲಿಂಗಂ ಎಂಬುವರು ನಿರ್ಮಾಣದ ಸಂಪೂರ್ಣ ಜವಾಬ್ದಾರಿ ಹೊತ್ತರು. ನೂರಾರು ಶಿಲ್ಪಿಗಳ ದೇವಾಲಯದ ನಿರ್ಮಾಣ ಹಾಗೂ ಶಿಲ್ಪದ ನಿರ್ಮಾಣದಲ್ಲಿ ತೊಡಗಿದ್ದುದನ್ನು ನೋಡುವುದಕ್ಕೆ ಒಂದು ಸಂತೋಷವಾಗಿತ್ತು.

ನಟರಾಜ ವಿಗ್ರಹದ ರೂಪದಲ್ಲೇ ಮನಸ್ಸು ಹೊಂದಿದ್ದ ವಾದಿರಾಜರಿಗೆ, ಬೇಕಾದ ಎಲ್ಲ ಅನುಕೂಲಗಳನ್ನೂ ಸಂಡೂರಿನವರು ಮಾಡಿಕೊಟ್ಟಿದ್ದರು. ಬೆಂಗಳೂರಿನಿಂದ ಯಾವಾಗ ಬೇಕೆಂದರೂ ಹೋಗಲು ಒಂದು ಕಾರು

ಸಿದ್ಧವಾಗಿಯೇ ಇರುತ್ತಿತ್ತು. ಈ ಎಲ್ಲ ಓಡಾಟಗಳಲ್ಲಿ ಆರೋಗ್ಯ ಕ್ಷೀಣಿಸಲು ಪ್ರಾರಂಭವಾಯಿತು. ಹುಳಿ, ಖಾರ, ತಿನ್ನಲಾಗದೆ ಹೊಟ್ಟೆ ನೋವಿನಿಂದ ನರಳುತ್ತಿದ್ದರು. ಹೋದ ಕಡೆಯೆಲ್ಲ ಪಥ್ಯದ ಆಹಾರ ಎಲ್ಲಿ ಸಿಗಬೇಕು ? ಕೆಲಸದಲ್ಲೇ ಗಮನವಿದ್ದ ಕಲಾವಿದನಿಗೆ ಆರೋಗ್ಯದ ಪರಿವೆಯಾದರೂ ಇರುವುದೆ ? ಜೊತೆಗೆ ಪ್ರತಿವರ್ಷ ಲಂಡನ್ನಿಗೆ ಹೋಗುವ ಕಾರ್ಯಕ್ರಮ ಲಂಡನ್ನಿನ Art in Action ತಂಡದವರು, "We have a Standing invitation for you every year" ಎಂದು ತಮ್ಮ ಅಭಿಮಾನವನ್ನು ವ್ಯಕ್ತಪಡಿಸಿದ್ದರು. ಇಷ್ಟೆಲ್ಲ ಕಾರ್ಯಕ್ರಮಗಳ ನಡುವೆ ನಟರಾಜ, ಶಿವಕಾಮಿಯವರ ವಿಗ್ರಹಗಳನ್ನು ಮಾಡಲು ಸುಮಾರು 5 ವರ್ಷಗಳೇ ಹಿಡಿದವು. ವಿಗ್ರಹದ ಪ್ರತಿಷ್ಠಾಪನೆಯನ್ನು ಬಹಳ ವಿಜೃಂಭಣೆಯಿಂದ ಮಾಡಿ, ಶಿಲ್ಪಿಗೆ ಗೌರವ ಸಲ್ಲಿಸಿದರು. ತುಂಬ ದಿನಗಳಿಂದ ಇದ್ದ ದೊಡ್ಡ ವಿಗ್ರಹ ಮಾಡಬೇಕೆಂಬ ಬಯಕೆ ಕೈಗೊಂಡಿತ್ತು. ಇನ್ನೇನು ರಚಿಸುವ ಅವಕಾಶ ಅದನ್ನು ಮಾಡಿಸಲು ಮೆಚ್ಚಿ ಬಂದ ಸಹೃದಯರು ಸಹಾಯಕ್ಕಾಗಿ ನಿಂತ ಶಿಷ್ಯವೃಂದ ಮಾಡಿದ್ದನ್ನೆಲ್ಲಾ ನೋಡಿ ಮೆಚ್ಚುವ ಅಭಿಮಾನಿಗಳ, ಸ್ನೇಹಿತರ ತಂಡ ಒಂದಕ್ಕಿಂತ ಒಂದು ಹಿತವಾಗಿದ್ದು, 'ಜೀವನವನ್ನೆಲ್ಲ ಕಲೆಗಾಗಿ ತೇಯ್ದ ಕಲಾವಿದನಿಗೆ ಇದಕ್ಕಿಂತ ಇನ್ನೇನು ಬೇಕು ?'

ಕೌಶಲ್ಯ: ತಾವು ಕಲಿತದ್ದನ್ನು ನಿರ್ವಂಚನೆಯಿಂದ ಶಿಷ್ಯರಿಗೆ ಧಾರೆಯೆರೆಯುತ್ತಿದ್ದ ವಾದಿರಾಜರಿಗೆ ಬೆಂಗಳೂರಿನ ಕೆನರಾ ಬ್ಯಾಂಕಿನವರು ಒಂದು ಹೊಸ ಅವಕಾಶ ಕೊಟ್ಟರು. ಕುಶಲ ಕಲಾವಿದರಿಗಾಗಿ ಏನಾದರೂ ಯೋಜನೆ ಮಾಡಿ ಎಂದು ಬ್ಯಾಂಕಿನವರು ಕೇಳಿದಾಗ Crafts council ಅಧ್ಯಕ್ಷೆಯಾಗಿದ್ದ ಶ್ರೀಮತಿ ವಿಮಲಾ ರಂಗಾಚಾರ್ ಅವರು ವಾದಿರಾಜರೊಡನೆ ಸಮಾಲೋಚನೆ ನಡೆಸಿದರು. ವಾದಿರಾಜರು ಬ್ರಿಟನ್ನಿನ ತಮ್ಮ ಮೊದಲ ಪ್ರವಾಸದಲ್ಲಿ ನೋಡಿಕೊಂಡು ಬಂದಿದ್ದ ಒಂದು 'Craftsmen Village' ನೆನಪಿಸಿಕೊಂಡರು. ಅಲ್ಲಿ ಹೊಸ ಪ್ರಯೋಗವೆಂದು ಪ್ರಾರಂಭಿಸಿದ್ದ ಈ ಕುಶಲಕಲಾವಿದರ ಹಳ್ಳಿ ಎಲ್ಲ ತರಹದ ಕಲಾವಿದರೂ, ಕುಶಲ ಕಲಾವಿದರೂ

ಕೆಲಸ ಮಾಡುತ್ತಾರೆ. ಅವರಿಗೆ ಕೆಲಸಕ್ಕೆ ಅನುಕೂಲವಾಗುವಂತೆ ಒಂದು "Common facility centre" ಇರುತ್ತದೆ. ಅದರಲ್ಲಿ ದೊಡ್ಡ ದೊಡ್ಡ ಯಂತ್ರಗಳು, ಮತ್ತೆ ಉಪಯುಕ್ತವಾದ Library, refrence items ಹೀಗೆ ಜೊತೆಗೆ ಒಂದು ಪ್ರದರ್ಶನ ಶಾಲೆ ಇದೆಲ್ಲದರ ಜೊತೆಗೆ ಆ ದಾರಿಯಲ್ಲಿ ಓಡಾಡುವ ಬಸ್ಸುಗಳಿಗೆ ಅಲ್ಲೊಂದು ನಿಲ್ದಾಣ ಹೀಗಾಗಿ ಸುಲಭವಾಗಿ ಜನಸಂಪರ್ಕ ಒದಗುತ್ತದೆ. ಪ್ರದರ್ಶನಾಲಯದಲ್ಲಿ ಎಲ್ಲರೂ ಕೃತಿಗಳನ್ನು ಪ್ರದರ್ಶಿಸಿದರೂ, ಯಾರಾದರೂ ಒಬ್ಬರು, ಸರದಿಯಂತೆ 3 ತಿಂಗಳ ಕಾಲ ಜವಾಬ್ದಾರಿ ವಹಿಸಿಕೊಳ್ಳಬೇಕು. ಇದೊಂದು ರೀತಿಯ ಸಾಮೂಹಿಕ ಪ್ರಯತ್ನ. ಈ ರೀತಿಯಲ್ಲಿ ಬಹಳ ಮುಂದುವರಿದವರ ಹಳ್ಳಿಗಳು ನಮ್ಮ ರಾಜ್ಯದಲ್ಲೇ ಇವೆ. ಶಿವಾರಪಟ್ಟಣ, ನಾಗಮಂಗಲ, ಸೊರಬ, ಸಾಗರ ಮುಂತಾದ ಕುಶಲಕಲಾವಿದರ ಊರುಗಳು, ಇವೆಲ್ಲವನ್ನು ಗುರಿಯಲ್ಲಿಟ್ಟುಕೊಂಡು ಬೆಂಗಳೂರಿನಲ್ಲಿ ಪ್ರಾರಂಭಿಸಲು ಒಂದು ಯೋಜನೆಯನ್ನು ತಯಾರಿಸಿದರು. ಇದೇ ಕನ್ನಿಂಗ್‌ಹ್ಯಾಂ ರಸ್ತೆಯಲ್ಲಿ ಪ್ರಾರಂಭವಾದ ''ಕೌಶಲ್ಯ''. ಕಲಾವಿದರು ಅಲ್ಲಿಯೇ ಕುಳಿತು ಕೆಲಸ ಮಾಡುವುದನ್ನು ಜನತೆ ನೋಡಬಹುದು, ಕಲಾವಿದರ ನೇರ ಸಂಪರ್ಕ ಪಡೆಯಬಹುದು, ಸಿದ್ಧಪಡಿಸಿದ ವಸ್ತುಗಳು ಇರುತ್ತವೆ. ತಮಗೆ ಬೇಕಾದ ಕೃತಿಗಳಿಗೂ ಬೇಡಿಕೆ ಸಲ್ಲಿಸಬಹುದು. ಬ್ಯಾಂಕಿನವರು ಸ್ಥಳದ ಜೊತೆಗೆ ಕೃತಿ ಸಿದ್ಧಪಡಿಸಿದ ಕೂಡಲೇ ಅದರ ಬೆಲೆಯ 70% ಕಲಾವಿದನಿಗೆ ಕೊಡುವುದರಿಂದ ಕಲಾವಿದ ಮಾರಾಟವಾಗುವವರೆಗೂ ಕಾಯದೆ ಕೆಲಸ ಮುಂದುವರೆಸಬಹುದು. ಮಾರಾಟವಾದ ಮೇಲೆ ಮಿಕ್ಕ ಹಣ ದೊರೆಯುವುದು. ಯೋಜನೆಯೇನೋ ಸಿದ್ಧವಾಯಿತು. ಮನೆಯಲ್ಲಿ ಕೆಲಸ ಮಾಡುವುದನ್ನು ಬಿಟ್ಟು ಕಲಾವಿದರು ಯಾರು ಹೋಗಿ ಅಲ್ಲಿ ಕೆಲಸ ಮಾಡುತ್ತಾರೆಂಬುದೇ ಸಮಸ್ಯೆಯಾಯಿತು. ತಮ್ಮಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಗಳನ್ನೇ ಅಲ್ಲಿ ಹೋಗಿ ಕೆಲಸ ಮಾಡಲು ಒಪ್ಪಿಸಿ, ತಾವೇ ಅಲ್ಲಿ ಹೋಗಿ ಕಲಿಸಲು ಪ್ರಾರಂಭಿಸಿದರು. ಈ ಕೌಶಲ್ಯದಲ್ಲಿ ಮರ, ಕಲ್ಲು, ಕೆತ್ತನೆಗಳ ಜೊತೆಗೆ Sheet metal work ಸುಟ್ಟ ಮಣ್ಣಿನ ಕೆಲಸ (Terracota) ಚಾಪೆ ನೇಯುವುದು ಮುಂತಾದ ಕುಶಲ ಕಲೆಯ ಕಲಾವಿದರಿದ್ದರು. ಅವರೆಲ್ಲರಿಗೂ ವಾದಿರಾಜರೇ ನಿರ್ದೇಶನ

ನೀಡುತ್ತಿದ್ದರು. ಇಂದು ಕೌಶಲ್ಯ ಬೆಂಗಳೂರಿನಿಂದ ಸುಮಾರು 30 ಕಿಲೋ ಮೀಟರ್ ದೂರದಲ್ಲಿ ಜೋಗರದೊಡ್ಡಿ ಎಂಬಲ್ಲಿ ಕುಶಲ ಕಲಾಗ್ರಾಮವಾಗಿ ಬೆಳೆದಿದೆ. ವಾದಿರಾಜರ ಕನಸಿನಂತೆ ಅಲ್ಲಿ ಕಲಾವಿದರಿಗೆ ವಾಸಗೃಹಗಳು, ದೊಡ್ಡ ಪ್ರದರ್ಶನಾಲಯ, ಯಂತ್ರೋಪಕರಣಗಳು, ಮತ್ತು ಯುವ ಪೀಳಿಗೆಗಾಗಿ ತರಬೇತಿ ಯೋಜನೆಗಳು, ಎಲ್ಲವೂ ಆಗಿವೆ. ವಾದಿರಾಜರ ಶಿಷ್ಯರಾದ ಶ್ರೀ ಅಶೋಕ ಗುಡಿಗಾರ, ಜಿ.ಎಲ್.ಭಟ್ ಸಮರ್ಥವಾಗಿ ತರಬೇತಿ ಕೊಡುತ್ತಾ, ಸಂಪ್ರದಾಯ ಕಲೆಗಳನ್ನು ಬೆಳೆಸುತ್ತಿದ್ದಾರೆ. ಅಲ್ಲಿ ತರಬೇತಿ ಪಡೆದ ವಿದ್ಯಾರ್ಥಿಗಳ ಕೆಲಸ ನೋಡಿದ ಕೂಡಲೆ ''ಇದು ವಾದಿರಾಜರ ಛಾಪು'' ಎಂದು ಗುರುತಿಸಬಹುದಾದ ಮಟ್ಟದಲ್ಲಿ ಯೋಗ್ಯತೆ ಉಳಿಸಿಕೊಂಡು ಬಂದಿದ್ದಾರೆಂದು ಹೇಳಲು ಹೆಮ್ಮೆಯಾಗುತ್ತದೆ. ಕೆಲಸದಲ್ಲಿ ಸಂಪ್ರದಾಯ ಶೈಲಿಗಳನ್ನು ಉಳಿಸಿರುವುದರ ಜೊತೆಗೆ, ಒಂದು ಉನ್ನತ ಮಟ್ಟವನ್ನು ಕೆಲ್ಲಸದಲ್ಲಿ ಕಾಣಬಹುದು. ಒಂದು ರೀತಿಯಲ್ಲಿ ವಾದಿರಾಜರ ಪರಂಪರೆ ಬೆಳೆಯುತ್ತಿರುವುದು ಸಂತೋಷದ ವಿಷಯ. ಇವುಗಳನ್ನೆಲ್ಲ ನೋಡಿ ವಾದಿರಾಜರು ಸಹ ತೃಪ್ತಿ ಹೊಂದಿದ್ದರು. ಸಾಯುವ ಎರಡು ತಿಂಗಳ ಮೊದಲು ಜೋಗರ ದೊಡ್ಡಿಯಲ್ಲಿ ಕೆನರಾ ಬ್ಯಾಂಕಿನವರು ಒಂದು ದೊಡ್ಡ ಸಮಾರಂಭವನ್ನು ಏರ್ಪಡಿಸಿದ್ದರು. ಆ ಕಾರ್ಯಕ್ರಮವನ್ನು ಉದ್ಘಾಟಿಸಲು ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ವೀರಪ್ಪ ಮೊಯ್ಲಿಯವರನ್ನು ಕರೆಸಿದ್ದರು. ಮೊಯ್ಲಿಯವರಿಗೆ ವಾದಿರಾಜರ ಬಗ್ಗೆ ಅಪಾರ ಅಭಿಮಾನ. ವಾದಿರಾಜರನ್ನೂ ಗೌರವಿಸುವ ಕಾರ್ಯಕ್ರಮವೂ ಇತ್ತು. ಏಕೆಂದರೆ ಜೋಗರದೊಡ್ಡಿಯಲ್ಲಿ ಇವರು ಹಮ್ಮಿಕೊಂಡ ಕಾರ್ಯಕ್ರಮಗಳೆಲ್ಲ ಯಶಸ್ವಿಯಾಗಿ, ಅದು ನೂರಾರು ವಿದ್ಯಾರ್ಥಿಗಳು ಕಲಿಯುವ ಕೇಂದ್ರವಾಗಿ ಬೆಳೆದಿತ್ತು. ಮೊಯ್ಲಿಯವರು ವಾದಿರಾಜರ ಸಾಧನೆಯನ್ನು ಮೆಚ್ಚಿ ''ಇಂತಹ ಕಲಾವಿದರು ನಮ್ಮ ದೇಶದ ಆಸ್ತಿ, ಎಂತಹ ಪರಿಸರದಿಂದ ಬಂದ ವಾದಿರಾಜರು, ಕೇವಲ ತಮ್ಮ ಸಾಧನೆಯಿಂದ, ಇಷ್ಟು ದೊಡ್ಡ ಕಲಾವಿದರಾಗಿ ಬೆಳೆದಿದ್ದಾರೆ. ಮಾತ್ರವಲ್ಲ ತಮ್ಮಂತೆ ಕಲೆಯಲ್ಲಿ ಅಭಿರುಚಿಯಿರುವ ನೂರಾರು ಆಸಕ್ತರಿಗೆ ದಾರಿ ಮಾಡಿಕೊಟ್ಟಿದ್ದಾರೆ. ಇವರ ಸಾಧನೆಯನ್ನು ಎಷ್ಟು ಹೊಗಳಿದರೂ ಸಾಲದು. ಕೇವಲ ವ್ಯಕ್ತಿಯಾಗಿ ಬೆಳೆಯದೆ

ಸುಂದರ ಸಮಾಜವನ್ನೂ ಸೃಷ್ಟಿಸಿದ್ದಾರೆ. ಕಿರಿಯರಿಗೆ ದಾರಿ ದೀಪವಾಗಿದ್ದಾರೆ'' ಎಂದು ಮೆಚ್ಚುಗೆಯ ಮಾತುಗಳನ್ನಾಡಿದರಂತೆ. ತಾವು ಮಾಡಿದ ಕೆಲಸವನ್ನು ಗುರುತಿಸಿ, ಆದರಿಸಿದ್ದನ್ನು ಕಂಡು ವಾದಿರಾಜರಿಗೆ ಹೃದಯ ತುಂಬಿ ಬಂದಿತ್ತು. ಅಲ್ಲಿಂದ ಬಂದವರೇ ಇದರ ಬಗ್ಗೆ ಹೇಳುತ್ತಾ, ಸಂತೋಷದ ಕಣ್ಣೀರು ಸುರಿಸಿದರು. ಸಾಧನೆಗೆ ತಕ್ಕ ಪ್ರತಿಫಲ ದೊರೆತಾಗಿನ ತೃಪ್ತಿ, ಆನಂದ ಕಣ್ಣೀರಿನ ಮೂಲಕ ಹೊರಬಂದಿತ್ತು.

## ಶಿಲ್ಪಕಲಾ ಪ್ರತಿಷ್ಠಾನ

ಕೌಶಲ್ಯ ಪ್ರಾರಂಭವಾದ ಸಮಯದಲ್ಲೇ ಅಂದರೆ 1987ರ ವೇಳೆ ಶಿಲ್ಪಕಲಾ ಪ್ರತಿಷ್ಠಾನವೆಂಬ ಅಧ್ಯಯನ ಕೇಂದ್ರವನ್ನು ವಾದಿರಾಜರು ಪ್ರಾರಂಭಿಸಿದರು. ಇದಕ್ಕೆ ಸ್ಫೂರ್ತಿ ಶ್ರೀ ಚಿರಂಜೀವ್ ಸಿಂಗ್ ಅವರು. ''ಕೇವಲ ಮಾವಿನ ಮರದ ಕೆಳಗೆ ಇಷ್ಟು ಚೆನ್ನಾಗಿ ಕೆತ್ತನೆ ಕಲಿಸುತ್ತಿದ್ದೀರಿ, ನೀವೇ ಒಂದು ಶಾಲೆ ಏಕೆ ಪ್ರಾರಂಭಿಸಬಾರದು ? ಕಟ್ಟಡ ಮುಂತಾದ ವ್ಯವಸ್ಥೆ ಮಾಡಬಹುದು'' ಎಂದು ಒಮ್ಮೆ ವಾದಿರಾಜರ ಕೆಲಸಗಳನ್ನು ನೋಡಲು ಬಂದಾಗ ಹೇಳಿದರು. ಹೇಗೂ ತರಗತಿಗಳ ರೀತಿ ಕೆಲಸ ನಡೆಯುತ್ತಿತ್ತು. ಶಿಲ್ಪ ಶಾಸ್ತ್ರದ ಅಧ್ಯಯನವನ್ನೂ ಹಮ್ಮಿಕೊಂಡರೆ ಒಂದು ರೀತಿಯ ಬೆಲೆ ಬರುವುದೆಂದು ಯೋಚಿಸಿ ಶಿಲ್ಪಶಾಸ್ತ್ರವನ್ನು ಬಲ್ಲ ತಮ್ಮ ಮಿತ್ರರಾದ ಪ್ರೊ. ಎಸ್.ಕೆ. ರಾಮಚಂದ್ರರಾಯರಲ್ಲಿ ಆಲೋಚಿಸಿದರು. ವಾದಿರಾಜರ ಎಲ್ಲ ಕೆಲಸಗಳನ್ನು ಗಮನಿಸುತ್ತಿದ್ದ ರಾಮಚಂದ್ರರಾಯರಿಗೆ ಇವರ ಆಲೋಚನೆ ಬಹಳವಾಗಿಯೇ ಹಿಡಿಸಿತು. ಸ್ವತಃ ಕಲಾವಿದರೂ, ಶಿಲ್ಪಿಗಳು, ಸಂಗೀತಜ್ಞರೂ ಆದ ರಾಮಚಂದ್ರರಾಯರು ಕೂಡ ತಮ್ಮ ಜ್ಞಾನವನ್ನು ಕಿರಿಯರಲ್ಲಿ ಆಸಕ್ತರಲ್ಲಿ ಹಂಚಿಕೊಳ್ಳಲು ಯಾವಾಗಲೂ ಸಿದ್ಧವಾಗಿರುತ್ತಾರೆ. ತಾವು ನಡೆಸಬೇಕೆಂದಿರುವ ಸಂಸ್ಥೆಗೆ ಅಧ್ಯಕ್ಷರಾಗಬೇಕೆಂದೂ, ತಮಗೆ ಇಂತಹ ಯಾವ ಕೆಲಸಗಳಲ್ಲೂ ಅನುಭವವಿಲ್ಲವೆಂದೂ ವಾದಿರಾಜರು ಕೇಳಿಕೊಂಡಾಗ ರಾಮಚಂದ್ರರಾಯರು ಒಪ್ಪಿದರು. ಮಾತ್ರವಲ್ಲ ಸಂಸ್ಥೆಗೆ ''ಶಿಲ್ಪಕಲಾ ಪ್ರತಿಷ್ಠಾನ'' ವೆಂಬ ಹೆಸರು ಸೂಚಿಸಿ, ಸಂಸ್ಥೆಯ ಕಾರ್ಯ ಕಲಾಪಗಳ ರೂಪು ರೇಷೆಗಳನ್ನು ಸಿದ್ಧಪಡಿಸಿದರು. ಮಿತ್ರರಾದ ಪ್ರಸಿದ್ಧ ಪತ್ರಿಕೋದ್ಯಮಿ ಶ್ರೀ ಇ.ಆರ್. ಸೇತುರಾಂ ಅವರು

ಉಪಾಧ್ಯಕ್ಷರಾದರು. ವಾದಿರಾಜರೇ ಕಾರ್ಯದರ್ಶಿಗಳು, ನಾನು ಖಜಾಂಚಿ, ಶಿಷ್ಯರೂ ಅಭಿಮಾನಿಗಳೂ ಸದಸ್ಯರಾದರು. ಪ್ರತಿಷ್ಠಾನದ ಉದ್ಘಾಟನೆಯ ಸಂದರ್ಭದಲ್ಲಿ ಒಂದು ಶಿಲ್ಪ ಪ್ರದರ್ಶನವನ್ನೂ ವ್ಯವಸ್ಥೆ ಮಾಡಿದರು. ಒಳ್ಳೆಯ ಉತ್ತೇಜನ ದೊರೆಯಿತು. ತರಗತಿಗಳ ಜೊತೆ ಶಿಲ್ಪಶಾಸ್ತ್ರದ ಉಪನ್ಯಾಸಗಳನ್ನು ಶ್ರೀ ರಾಮಚಂದ್ರರಾಯರು ನಡೆಸುತ್ತಿದ್ದರು. ಅದೂ ಅಲ್ಲದೆ ಶಿಲ್ಪಿಗಳು ಮಾತನಾಡುವುದನ್ನೂ ಕಲಿಯಬೇಕೆಂಬ ಉದ್ದೇಶದಿಂದ ಪ್ರತಿ ಬುಧವಾರ ವಾದಿರಾಜರ ಮನೆಯಲ್ಲಿ ಒಂದು ಸಣ್ಣ ಸಭೆ ಸೇರಿ, ವಿದ್ಯಾರ್ಥಿಗಳೇ ಕಾರ್ಯಕ್ರಮವನ್ನು ನಿರೂಪಿಸುವುದರಿಂದ ಹಿಡಿದು ಭಾಷಣ, ವಂದನಾರ್ಪಣೆಗಳವರೆಗೆ ನಡೆಸಬೇಕು. ಹೀಗೆ ಒಂದು ರೀತಿ ನಿಧಾನ ಗತಿಯಲ್ಲಿ ನಡೆಯುತ್ತಿದ್ದ ಚಟುವಟಿಕೆಗಳಿಗೆ ಶ್ರೀ ಹೆಚ್.ಎನ್. ಸುರೇಶ್ ಅಂತ ಉತ್ಸಾಹಿ ಯುವ ಕಲಾವಿದರು ಬಂದು, ಹೊಸ ಚಾಲನೆ ಕೊಟ್ಟರು. ಹಲವಾರು ನೆನಪಿಟ್ಟುಕೊಳ್ಳುವಂತಹ ಕಾರ್ಯಕ್ರಮಗಳಾದವು. ಉಪಯುಕ್ತ ಲೇಖನಗಳಿಂದ ಕೂಡಿದ ''ಶಿಲ್ಪಕಲಾ'' ಪತ್ರಿಕೆಯೂ ಪ್ರಾರಂಭವಾಯಿತು. ಬಂದಿದ್ದೇ ಎರಡು ಸಂಚಿಕೆಗಳು, ಎರಡನ್ನೂ ಮಿತ್ರರಾದ ಪಯೋನಿಧಿ ಪ್ರೆಸ್‌ನ ಮಾಲೀಕರಾದ ಶ್ರೀ ವೆಂಕಟರಾಂ ತಮ್ಮ ಖರ್ಚಿನಲ್ಲೇ ಹೊರತಂದರು. ಜೊತೆಗೆ ಶಾಸ್ತ್ರ ತರಗತಿಯ ಉಪನ್ಯಾಸ ಮಾಲಿಕೆಯನ್ನು ಸೇರಿಸಿ ''ಶಿಲ್ಪಶಾಸ್ತ್ರದ ಪರಿಚಯ''ದ ಒಂದು ಸಣ್ಣ ಹೊತ್ತಗೆಯನ್ನು ರಾಮಚಂದ್ರರಾಯರೇ ಬರೆದರು. ಇಂಡಿಯಾ ಬುಕ್ ಹೌಸ್‌ನ ಶ್ರೀ ಜಿ.ಕೆ. ಅನಂತರಾಂ ಅವರು ಪ್ರಕಟಿಸಿದರು. ಇದೆಲ್ಲ ಅವರ ಕೊಡುಗೆಗಳು.

'ಶಿಲ್ಪೋತ್ಸವ 90' ಮತ್ತು ವಾರ್ಷಿಕ ಶಿಲ್ಪ ಪ್ರದರ್ಶನಗಳನ್ನು ಹಮ್ಮಿಕೊಂಡಿದ್ದಾಯಿತು. ಶಿಲ್ಪೋತ್ಸವಕ್ಕೆ ಮುಂಚೆ ಕೆಲವು ಶಿಲ್ಪ ಶಿಬಿರಗಳನ್ನು ನಡೆಸಿದ್ದೆವು. ಈ ಶಿಲ್ಪ ಶಿಬಿರಗಳ ಬಗ್ಗೆ ವಿಶೇಷವಾಗಿಯೇ ಬರೆಯಬೇಕು.

## ಶಿಲ್ಪ ಶಿಬಿರಗಳು

ವಾದಿರಾಜರ ಅಧ್ಯಯನದ ಆಸಕ್ತಿಯೇ ಶಿಲ್ಪ ಶಿಬಿರಗಳಿಗೆ ಕಾರಣವೆಂದು ಹೇಳಬಹುದು. 1987ರಲ್ಲಿ ದಕ್ಷಿಣ ಮಧ್ಯವಲಯ ಸಾಂಸ್ಕೃತಿಕ ಕೇಂದ್ರದವರು

ನಾಗಪುರ) ಕರ್ನಾಟಕದ ಕನ್ನಡ ಸಂಸ್ಕೃತಿ ಇಲಾಖೆಯವರೊಡನೆ ಜಂಟಿಯಾಗಿ, ದೇಶದಲ್ಲೇ ಮೊದಲ ಬಾರಿಗೆ ಒಂದು ಅಧ್ಯಯನ ಕಾರ್ಯಾಗಾರವನ್ನು ನಡೆಸುವ ಯೋಜನೆಯ ಬಗ್ಗೆ ವಿಚಾರ ವಿನಿಮಯ ಮಾಡಿಕೊಳ್ಳಲು ವಾದಿರಾಜರನ್ನು ಭೇಟಿಯಾದರು. ಶ್ರೀ ಕಮಲಾಕರ್ ಸೊಂಟಕ್ಕಿ ಎಂಬ ಖ್ಯಾತ ನಾಟಕಕಾರ ಹಾಗೂ ನಾಗಪುರ ಸಾಂಸ್ಕೃತಿಕ ಕೇಂದ್ರದ ನಿರ್ದೇಶಕರಾಗಿದ್ದರು. ವಾದಿರಾಜರ ಜೊತೆ ಮಾತನಾಡಿದಾಗ ಸಂಪ್ರದಾಯ ಶಿಲ್ಪಿಗಳಿಗಾಗಿ ಇವರಿಗಿದ್ದ ಕಳಕಳಿಯನ್ನು ಕಂಡು ಬಹಳ ಆನಂದಪಟ್ಟರು. ಕಾರ್ಯಾಗಾರವನ್ನು ಎಲ್ಲಿ, ಹೇಗೆ ನಡೆಸುವುದು ಎಂಬುದರ ಬಗ್ಗೆ ವಾದಿರಾಜರು ಕೆಲವು ಅಂಶಗಳೊಡನೆ ಸೂಚನೆಯಿತ್ತರು. ಅದರಂತೆ ಬಾದಾಮಿಯಲ್ಲಿ ಚಾಲುಕ್ಯ ಶೈಲಿಯ ಅಧ್ಯಯನದ ಶಿಬಿರ ನಡೆಸುವ ಯೋಜನೆ ಸಿದ್ಧವಾಯಿತು.

## ಚಾಲುಕ್ಯ ಶೈಲಿಯ ಅಧ್ಯಯನ – 'ಬಾದಾಮಿ'ಯ ಶಿಬಿರ

ಮೊದಲ ಶಿಲ್ಪ ಶಿಬಿರ 1988ರ ಫೆಬ್ರವರಿ ಎರಡನೆಯ ವಾರದಲ್ಲಿ ಬಾದಾಮಿಯಲ್ಲಿ ಪ್ರಾರಂಭವಾಯಿತು.

ವಾದಿರಾಜರೇ ಶಿಬಿರದ ನಿರ್ದೇಶಕರು ಮತ್ತು ಅವರ ಸಹ ನಿರ್ದೇಶಕರಾಗಿ ಅವರ ಶಿಷ್ಯರನ್ನೇ ಆರಿಸಿದರು. ಕಾರಣ, ಅವರಲ್ಲೇ ಕಲಿತವರಿಗೆ ಅವರು ಕಲಿಸುವ ವಿಧಾನಗಳ ಪರಿಚಯವಿದ್ದು, ಹೊಸಬರಿಗೆ ತಿಳಿಸುವಾಗ ಅನುಕೂಲವಾಗುತ್ತದೆಯೆಂಬ ಉದ್ದೇಶ. ಹೀಗಾಗಿ, ನಾನು, ಶ್ರೀ ಶ್ಯಾಮಾಚಾರ್ಯರು ಹಾಗೂ ರೇಖಾಚಿತ್ರ ಬಿಡಿಸಲು ಸಹಾಯಕ್ಕಾಗಿ ಡಿಸೈನ್ ಸೆಂಟರಿನ ಶ್ರೀ ಮೋಹನ್ ಎಂಬ ಕಲಾವಿದರನ್ನು ಮೂವರು ಸಹ ನಿರ್ದೇಶಕರನ್ನಾಗಿ ಆರಿಸಿದರು. ಆಂಧ್ರ, ಕರ್ನಾಟಕ, ತಮಿಳುನಾಡು, ಮಧ್ಯಪ್ರದೇಶ, ಮಹಾರಾಷ್ಟ್ರಗಳಿಂದ ಒಂದೊಂದು ರಾಜ್ಯದಿಂದ ನಾಲ್ವರು ಶಿಲ್ಪಿಗಳನ್ನು ಕಳುಹಿಸಲು ತಿಳಿಸಲಾಯಿತು.

ಶಿಬಿರ ಪ್ರಾರಂಭವಾಗಲು ಎರಡು ದಿನಗಳ ಮುಂಚೆಯೇ ಎಲ್ಲರೂ ಅಲ್ಲಿ ಹೋದೆವು. ಕರ್ನಾಟಕ ಬಿಟ್ಟರೆ ಬೇರೆ ರಾಜ್ಯಗಳಿಂದ ಶಿಲ್ಪಿಗಳು ಬಂದಿದ್ದು



ಪಾರ್ವತಿ - ಚಾಲುಕ್ಯ ಶೈಲಿ

ಬಹಳ ಕಡಿಮೆ. ಇಂತಹ ಶಿಬಿರ ಮೊದಲ ಬಾರಿಗೆ ನಡೆಯುತ್ತಿರುವುದರಿಂದ ಶಿಲ್ಪಿಗಳಿಗೂ ಸ್ವಲ್ಪ ಹೊಸ ಅನುಭವ, ವಾದಿರಾಜರು, ನಾಗಪುರದ ಕಾರ್ಯಕರ್ತ ಶ್ರೀ ದೇಶಮುಖ್‌ರವರೊಡನೆ ಚರ್ಚಿಸಿ, ಬೇರೆ ರಾಜ್ಯಗಳಿಂದ ಬರದಿದ್ದವರಿಗೆ ಬದಲಾಗಿ ಬಾದಾಮಿಯ ಸುತ್ತ ಮುತ್ತ ಇರುವ ಸಂಪ್ರದಾಯ ಶಿಲ್ಪಿಗಳಿಗೇ

ಹೆಚ್ಚಿನ ಅವಕಾಶ ಕೊಡೋಣವೆಂದು ಯೋಚಿಸಿ, ತಾವೇ ಹೋಗಿ ಹಲವಾರು ಶಿಲ್ಪಿಗಳನ್ನು ಕಂಡು, ಕರೆದು ತಂದರು.

ಬಾದಾಮಿಯ ಮೇಣ ಬಸದಿಗಳ ಎದುರಿಗೆ ಒಂದು ದೊಡ್ಡ ಟೆಂಟ್ ಹಾಕಿಸಿದರು. ಆ ಜಾಗ ಪ್ರಾಚ್ಯ ಸಂಶೋಧನಾ ಇಲಾಖೆಗೆ ಸೇರಿದ್ದು. ಶಿಬಿರದ ಬಗ್ಗೆ ತಿಳಿಸಿ, ಕೆಲಸ ಮಾಡಲು ಅವಕಾಶ ಕೇಳಿದಾಗ ಇಲಾಖೆಯ ನಿರ್ದೇಶಕರಾಗಿ ಶ್ರೀ ನರಸಿಂಹಯ್ಯನವರು ಸಂತೋಷವಾಗಿ ಒಪ್ಪಿದಲ್ಲದೆ, ಇಲಾಖೆಯ ಕಡೆಯಿಂದ ಪೂರ್ತಿ ಪ್ರೋತ್ಸಾಹವನ್ನಿತ್ತರು. ಜೊತೆಗೆ ಶಿಬಿರಾರ್ಥಿಗಳು ಸಂಜೆಯ ವೇಳೆ ವೀಕ್ಷಿಸಲು ಇಲಾಖೆಯ ಸಂಗ್ರಹದಲ್ಲಿದ್ದ 150 ಸ್ಲೈಡ್‌ಗಳನ್ನೂ ಕೊಟ್ಟರು.

ಬಾದಾಮಿಯ ಶಿಬಿರ ಬಹಳ ಚೆನ್ನಾಗಿಯೇ ನಡೆಯಿತು, ಅನುಭವವಿಲ್ಲದಿದ್ದರೂ ಪ್ರಾರಂಭದ ಮೂರು ದಿನಗಳಲ್ಲಿ ಬಾದಾಮಿ, ಐಹೊಳೆ, ಪಟ್ಟದ ಕಲ್ಲು ಪ್ರದೇಶಗಳಲ್ಲಿರುವ ಎಲ್ಲ ದೇವಾಲಯಗಳನ್ನೂ ನಿಧಾನವಾಗಿ ವೀಕ್ಷಿಸಿದೆವು. ದೇವಾಲಯಗಳನ್ನು ಶಿಲ್ಪಿಯಾದವನು ಹೇಗೆ ನೋಡಬೇಕೆಂಬುದನ್ನು ವಾದಿರಾಜರು ಸೂಚನೆ ಕೊಟ್ಟರು. ಪ್ರತಿಯೊಂದು ಶಿಲ್ಪವನ್ನೂ ಸೂಕ್ಷ್ಮವಾಗಿ ಗಮನಿಸಬೇಕು. ಮುಖ, ಕೈಕಾಲು, ಅಂಗಾಂಗಗಳು, ನಾವು ಕಡೆಯುವಾಗ ಹೇಗೆ ನೋಡುತ್ತೇವೋ ಆ ದೃಷ್ಟಿಯಿಂದಲೇ ನೋಡಬೇಕು. ನಮ್ಮ ಶಿಬಿರದಲ್ಲಿದ್ದ ಹಲವಾರು ಶಿಲ್ಪಿಗಳು ಬಿಚ್ಚು ಮನಸ್ಸಿನಿಂದ ''ನಾವೆಲ್ಲ ಕೆಲಸ ಮಾಡುವವರು, ನಮ್ಮ ಮುಂದೆ ಇಂತಹ ನಿಧಿಯಿದ್ದರೂ ಅದನ್ನು ಹೇಗೆ ನೋಡಬೇಕೆಂಬುದೇ ತಿಳಿದಿರಲಿಲ್ಲ. ಇಂದು ನೀವು ನಮಗೆ ಹೊಸ ಕಣ್ಣು ಕೊಟ್ಟಿರಿ'' ಎಂದು ವಾದಿರಾಜರಲ್ಲಿ ಹೇಳಿಕೊಂಡರು. ಆ ಶಿಲ್ಪಿಗಳ ಅಂದಿನ ಉತ್ಸಾಹ ವರ್ಣನಾತೀತ. ಪ್ರತಿಯೊಂದು ಮೂಲೆಯಲ್ಲಿರುವ ಶಿಲ್ಪಗಳನ್ನೆಲ್ಲಾ ಕೂಲಂಕಷವಾಗಿ ನೋಡುವುದು, ಒಂದಲ್ಲ ಹಲವಾರು ಬಾರಿ, ತಮಗೆ ಇಷ್ಟವಾದ ಶಿಲ್ಪದ ರೇಖಾಚಿತ್ರ ಮಾಡುವುದು, ಅದರ ಬಗ್ಗೆ ಚರ್ಚಿಸುವುದು. ಹೀಗೆ ಮೂರು ದಿನಗಳು, ಬರೀ ನೋಡುವುದೂ ರೇಖಾಚಿತ್ರ ಮಾಡುವುದೂ, ಇದರಲ್ಲೇ ಆಯಿತು. ರೇಖಾಚಿತ್ರ ಮಾಡಿಕೊಳ್ಳುವ ಮಹತ್ವದ ಬಗ್ಗೆ ವಾದಿರಾಜರು ಹೇಳಿದಾಗ ಶಿಲ್ಪಿಗಳಿಗೇ ಇನ್ನೊಂದು ಹೊಸ

ಪಾಠವಾದಂತಾಯಿತು. "ನಮಗೆ ಈ ರೀತಿ ಮಾಡುವುದೇ ತಿಳಿಯದು. ಮೊದಲನೆಯದಾಗಿ ನಾಗರಕಲ್ಲು, ನವಗ್ರಹ, ಹೆಚ್ಚೆಂದರೆ ಗಣೇಶ ಮಾಡುವುದನ್ನು ಬಿಟ್ಟರೆ ಬೇರೆ ಶಿಲ್ಪವನ್ನೂ ಮಾಡಬಹುದೆಂಬ ಕಲ್ಪನೆಯೇ ಇರಲಿಲ್ಲ. ಅದನ್ನು ನಮಗೆ ತೋಚಿದಂತೆ, ಒಟ್ಟು ಕೈಕಾಲು, ಆಯುಧಗಳಿರುವಂತೆ ಮಾಡಿದರಾಯಿತು ಎಂದು ಯೋಚಿಸುತ್ತೇವೆಯೇ ಹೊರತು, ಅದರಲ್ಲೂ 'ಅಂದ' ವಿದೆ ಎಂಬ ಅಂಶವೇ ತಿಳಿಯದು. ಬೇಡಿಕೆಗೆ ತಕ್ಕಂತೆ ಮಾಡಿ, ಮಾಡಿ 'ಶಿಲ್ಪದಲ್ಲಿ ಸೌಂದರ್ಯವಿದೆ' ಎಂಬ ಪ್ರಜ್ಞೆಯನ್ನು ಕಳೆದುಕೊಂಡಿದ್ದೇವೆ" ಎಂದು ತಮ್ಮ ಅಸಹಾಯಕತೆ, ಒಂದು ರೀತಿ ಅಜ್ಞಾನವೆಂದು ಹೇಳಬಹುದು. ಇವುಗಳ ಬಗ್ಗೆ ತೋಡಿಕೊಂಡರು. ಒಟ್ಟು ಎಲ್ಲೆಲ್ಲೂ ಇಂತಹುದೇ ಸ್ಥಿತಿಯಿದ್ದು, ಶಿಲ್ಪಿಗಳ ಸೌಂದರ್ಯದ ಬಗ್ಗೆ ಯೋಚಿಸುವುದನ್ನೇ ಬಿಟ್ಟಿದ್ದಾರೆನ್ನಬಹುದು. ಹೀಗಿರುವಾಗ ಸೌಂದರ್ಯ ಪೂರ್ಣವಾಗಿ ಹೇಗೆ ಮಾಡುವುದೆಂದು ತಿಳಿಸಿದಾಗ ಎಂತಹ ಅನುಭವ ಹೊಸ ಪಾಠ! ಇಂತಹ ಶಿಲ್ಪಿಗಳಿಗೆ ಕಲಿಸುವುದು ಸುಲಭವಲ್ಲ. ಅವರು ತಮ್ಮ ಹಳೆಯ ಪದ್ಧತಿಗಳನ್ನು ಬಿಟ್ಟು ಹೊಸದಕ್ಕೆ ಬರಬೇಕಾದರೆ ಸ್ವಲ್ಪ ಒತ್ತಾಯ ಹೇರಬೇಕಿತ್ತು. "ಶಿಲ್ಪವನ್ನಾದರೂ ಕಡಿದು ಬಿಡುತ್ತೇವೆ" ಎನ್ನುವ ಮನೋಭಾವ ಬೆಳೆಸಿಕೊಂಡವರಿಗೆ ಇದೊಂದು ಹೊಸ ಸವಾಲು.

ರೇಖಾ ಚಿತ್ರದ ನಂತರ ಮಣ್ಣಿನಲ್ಲಿ, 15 ದಿನಗಳಲ್ಲಿ ಶಿಲೆಯಲ್ಲಿ ಮಾಡಬಹುದಾದ ಶಿಲ್ಪವನ್ನು ಮಾಡಲು ಹೇಳಿದರು. ನಾವು ಮೂವರು ನಿರ್ದೇಶಕರು ಅವರು ಮಣ್ಣಿನಲ್ಲಿ ಮಾಡಿದ ಕೃತಿಗಳನ್ನು ಪ್ಲಾಸ್ಟರ್‌ನಲ್ಲಿ ಮಾಡಿದ್ದೆವು. ಹೀಗಾಗಿ ಪ್ಲಾಸ್ಟರ್ ಕಿರುಕೃತಿಗಳನ್ನು ಎದುರಿಗಿಟ್ಟುಕೊಂಡು ಕಲ್ಲನ್ನು ಕಡಿಯಲು ಪ್ರಾರಂಭಿಸಿದರು. ಅಲ್ಲಿ ಬಂದಿದ್ದ ಹೆಚ್ಚಿನ ಶಿಲ್ಪಿಗಳು ಅದೇ ಪ್ರದೇಶದವರಾದರೂ ಕೆಂಪು ಹರಳುಗಲ್ಲು ಬಳಸಿ ಶಿಲ್ಪ ಮಾಡಿರಲಿಲ್ಲ. ಅಲ್ಲಿಯೇ ದೊರೆಯುವ ಇನ್ನೊಂದು ಮೃದು ಮಾಧ್ಯಮ, ಸ್ಲೇಟಿನಂತಿರುವ ಪದರ ಕರಿಕಲ್ಲು ಬಳಸಿ ಶಿಲ್ಪ ಮಾಡಿದವರು. ಎಲ್ಲರಿಗೂ ಈ ಕೆಂಪುಗಟ್ಟಿಕಲ್ಲು ಕಂಡು ಹೆದರಿಕೆಯೇ ಆಯಿತು. ವಾದಿರಾಜರು ಮಾತ್ರ ಸ್ವಲ್ಪವೂ ಹೆದರಲಿಲ್ಲ. "ಇದೇನು ಆರ್ಡರ್‌ಗೋಸ್ಕರ ಮಾಡುತ್ತಿರುವ ಶಿಲ್ಪವಲ್ಲ, ಅಧ್ಯಯನ ಮಾಡುತ್ತಿದ್ದೇವೆ. ಹೀಗಿರುವಾಗ ಶೈಲಿಯನ್ನು ಕಲಿಯುವುದರ ಜೊತೆಗೆ ಬೇರೆ

ಬೇರೆ ಮಾಧ್ಯಮಗಳನ್ನು ಬಳಸುವುದೂ, ಅದಕ್ಕೆ ಬೇಕಾದ ಉಳಿಗಳನ್ನು ತಯಾರಿಸಿಕೊಳ್ಳುವುದೂ, ಎಲ್ಲವನ್ನೂ ಕಲಿಯೋಣ, ಇದೇ ನಿಜವಾದ ಅಧ್ಯಯನ'' ಎಂದು ಪ್ರೋತ್ಸಾಹದ ಮಾತುಗಳನ್ನಾಡಿದಲ್ಲದೆ, ಸ್ವತಃ ಕುಳಿತು ಪ್ರತಿಯೊಬ್ಬರ ಶಿಲ್ಪದಲ್ಲೂ ಕೆಲಸ ಮಾಡುತ್ತಿದ್ದರು. ಯಾರಿಗೂ ಸಮಯದ ಪರಿವೆಯೇ ಇರುತ್ತಿರಲಿಲ್ಲ. ಬೆಳಿಗ್ಗೆ ಬೇಗನೇ ಎದ್ದು, 6 ಘಂಟೆಯ ವೇಳೆಗೆಲ್ಲ ಪ್ರತಿಯೊಬ್ಬರೂ ಪುಸ್ತಕ ಪೆನ್ಸಿಲ್‌ಗಳನ್ನು ಹಿಡಿದು ದೇವಾಲಯಗಳ ಬಳಿ ರೇಖಾಚಿತ್ರ ಬಿಡಿಸಲು ಹೋಗುತ್ತಿದ್ದೆವು. ಇದಕ್ಕೆ ವಾದಿರಾಜರೇ ಮುಂದಾಳು. ಎಂಟೂವರೆ ಘಂಟೆಯವರೆಗೂ ಈ ರೇಖಾಚಿತ್ರದ ಅಧ್ಯಯನ. ಉಪಹಾರ ಮುಗಿದೊಡನೆ ಕೆಲಸಕ್ಕೆ ಕುಳಿತು, ಮಧ್ಯಾಹ್ನ ಒಂದು ಘಂಟೆಯವರೆಗೂ ಕೆತ್ತನೆ, ಊಟ, ವಿಶ್ರಾಂತಿಗಳ ನಂತರ 4 ಘಂಟೆಗೆ ಮತ್ತೆ ಕೆತ್ತನೆ ಪ್ರಾರಂಭ. ಆ ಪ್ರದೇಶದಲ್ಲಿ ಬಿಸಿಲು ಜಾಸ್ತಿಯಿದ್ದುದರಿಂದ ಎಲ್ಲರೂ ಕಡ್ಡಾಯವಾಗಿ ವಿಶ್ರಾಂತಿ ತೆಗೆದುಕೊಳ್ಳಲು ಹೇಳಿ, ಬಿಸಿಲಿನ ಝಳ ಕಡಿಮೆಯಾದ ನಂತರ, ಕೆಲಸ ಪ್ರಾರಂಭ ಮಾಡಿದರೆ ಕತ್ತಲಾಗುವವರೆಗೂ ನಡೆಯುತ್ತಿತ್ತು. ಅದೊಂದು ಸುಂದರ ಶಿಲ್ಪಸಂಸಾರದಂತಿತ್ತು. ಯಾರಿಗೂ ಮನೆಯ ಸಮಸ್ಯೆಗಳಿರಲಿಲ್ಲ. ಸಮಯಕ್ಕೆ ಸರಿಯಾಗಿ ರುಚಿರುಚಿಯಾದ ಊಟ ತಿಂಡಿಗಳ ವ್ಯವಸ್ಥೆ. ಒಂದೇ ಮನೆಯವರಂತೆ ಕೆಲಸ ಮಾಡುವುದು. ಸಂಜೆ ಸ್ಲೈಡ್‌ಗಳನ್ನು ನೋಡುವುದು, ಆಗ ತಾವು ಮಾಡುತ್ತಿರುವ ಶಿಲ್ಪದ ಸ್ಲೈಡ್ ಬಂದರಂತೂ, ಬಿಚ್ಚು ಮನಸ್ಸಿನಿಂದ ಸರಿ ತಪ್ಪುಗಳ ಬಗ್ಗೆ ಚರ್ಚಿಸುವುದು, ಒಬ್ಬರಿಗೊಬ್ಬರ ಪರಿಚಯ, ಗಾಯನ, ನೃತ್ಯ ಹೀಗೆ ರಾತ್ರಿಯವರೆಗೂ ಒಟ್ಟಿಗೇ ಕಾಲ ಕಳೆಯುತ್ತಿದ್ದೆವು. ಅದು ಬೆಳದಿಂಗಳಕಾಲ. ಬಸದಿಗಳ ಎದುರಿಗೆ ಹಾಕಿದ್ದ ಚಪ್ಪರವೇ ನಮ್ಮ ಕಾರ್ಯಕ್ರಮಗಳ ತಾಣ. ಆ ಹದಿನೈದು ದಿನಗಳು ಹದಿನೈದು ನಿಮಿಷಗಳಂತೆ ಕಳೆದುಹೋದವು. ನಮ್ಮ ಪರಿಶ್ರಮದ ಫಲವಾಗಿ ತಯಾರಿಸಿದ ಶಿಲ್ಪಗಳು ಬಾದಾಮಿಯ ಶಿಲ್ಪಗಳನ್ನೇ ಹೋಲುತ್ತಿದ್ದವು, ಎಲ್ಲರಿಗೂ ಹೊಸ ಚೈತನ್ಯ ಬಂದಿತ್ತು. ಶಿಲ್ಪಗಳನ್ನೆಲ್ಲ ನಾಗಪುರದವರು ತಮ್ಮ ಕೇಂದ್ರ ಸಂಗ್ರಹಾಲಯಕ್ಕಾಗಿ ತೆಗೆದುಕೊಂಡು ಹೋದರು.

ಇದಾದನಂತರ 1989ರವರೆಗೆ ಯಾವ ಶಿಬಿರವೂ ಇರಲಿಲ್ಲ. ಶಿಲ್ಪಕಲಾ ಪ್ರತಿಷ್ಠಾನ ಬೆಳೆಯುತ್ತಿತ್ತು. ಅದರ ಕಡೆಯಿಂದ ''ಹೊಯ್ಸಳ ಶಿಬಿರ''ವನ್ನು

ಹಮ್ಮಿಕೊಂಡರು. ಹಣದ ಅಭಾವದಿಂದ ಶಿಲ್ಪಕ್ಷೇತ್ರಕ್ಕೆ ಹೋಗದೆ ವಾದಿರಾಜರು ತಮ್ಮ ಮನೆಯಲ್ಲೇ ಶಿಬಿರದ ವ್ಯವಸ್ಥೆ ಮಾಡಿದರು. ಸ್ಲೈಡ್‌ಗಳೂ, ಪುಸ್ತಕಗಳು, ಛಾಯಾಚಿತ್ರಗಳೂ ಇದ್ದವಲ್ಲ. ಕೊನೆಯ ಮೂರು ದಿನಗಳನ್ನು ಮಾತ್ರ ವೆಂಕಟಪ್ಪ ಕಲಾಭವನದಲ್ಲಿ ನಡೆಸಿದರು. ಜನತೆಗೆ ತಿಳಿಯಲಿ ಎಂದು. ಆ ಮುಕ್ತಾಯ ಸಮಾರಂಭ ನಡೆದಾಗ ಶ್ರೀ ಚಿರಂಜೀವಿ ಸಿಂಗ್ ತಾವೇ ಬಂದು, ನೋಡಿ, ಮೆಚ್ಚಿ, ಇಂತಹ ಮತ್ತೊಂದು ಶಿಬಿರ ಮಾಡುವುದಾದರೆ, ಮೈಸೂರಿನ Administrative Training Institute ನಲ್ಲಿ ಅವಕಾಶ ಮಾಡಿಕೊಡುವುದಾಗಿ ಆಹ್ವಾನವಿತ್ತರು. ವಾದಿರಾಜರಿಗೆ ಹೊಸ ಉತ್ಸಾಹ ತಂದಿತು. ಅದೇ ಆಗಸ್ಟ್ ತಿಂಗಳಲ್ಲಿ ಚಾಲುಕ್ಯ ಶಿಲ್ಪ ಶಿಬಿರದ ವ್ಯವಸ್ಥೆಯಾಯಿತು. ಮೊದಲೇ ಚಾಲುಕ್ಯ ಶೈಲಿಯ ಅಧ್ಯಯನ ಬಾದಾಮಿಯಲ್ಲಿ ನಡೆದದ್ದರಿಂದ, ಅದರ ಅನುಭವ, ಜೊತೆಗೆ ಸ್ಲೈಡ್‌ಗಳ ಸಹಾಯದಿಂದ, ಅಧ್ಯಯನ ನಡೆಯಿತು. ವಿಚಾರಗೋಷ್ಠಿ ಪಂಡಿತರಿಂದ ಭಾಷಣಗಳು, ಚರ್ಚೆಗಳು ನಡೆದು, ಸಂಪ್ರದಾಯ ಶಿಲ್ಪಿಗಳಿಗೆ ಹೊಸ ದಾರಿಯನ್ನು ಹಾಕಿಕೊಟ್ಟಂತಾಯಿತು.

ಮೈಸೂರಿನ ಚಾಲುಕ್ಯ ಶಿಲ್ಪ ಶಿಬಿರ ಮುಗಿಯುತ್ತಿದ್ದಂತೆ ''ಶಿಲ್ಪೋತ್ಸವ-89'' ಎಂಬ ವಾರ್ಷಿಕ ಶಿಲ್ಪಿಗಳ ಸಮ್ಮೇಳನವನ್ನು ಶಿಲ್ಪಕಲಾ ಪ್ರತಿಷ್ಠಾನದ ವತಿಯಿಂದ ಹಮ್ಮಿಕೊಂಡರು. ಈ ವೇಳೆಗಾಗಲೇ 'ಶಿಲ್ಪಕಲಾ' ಪತ್ರಿಕೆಯ ಎರಡು ಸಂಚಿಕೆಗಳೂ ಪ್ರಕಟವಾಗಿದ್ದವು. ಶಿಲ್ಪೋತ್ಸವದ ಖರ್ಚಿಗಾಗಿ ಜಾಹಿರಾತುಗಳಿಂದ, ದಾನಿಗಳಿಂದ ಹಣ ಕೂಡಿಸಿದ್ದಾಯಿತು. ಸಮ್ಮೇಳನದ ಅಧ್ಯಕ್ಷ ಸ್ಥಾನಕ್ಕೆ ಕಂಚುಶಿಲ್ಪಿ ಶ್ರೀ ಶ್ರೀನಿವಾಸಾಚಾರ್ಯರನ್ನು ಆರಿಸಿದರು. ನಾಡಿನಾದ್ಯಂತ ಶಿಲ್ಪಿಗಳು, ಶಿಲ್ಪಶಾಸ್ತ್ರ ಪಂಡಿತರು, ಇತಿಹಾಸಕಾರರೂ ಬಂದು ಭಾಗವಹಿಸಿ, ಸಮ್ಮೇಳನವನ್ನು ಯಶಸ್ವಿಗೊಳಿಸಿದರು. ಈ ಕಾರ್ಯಕ್ರಮಗಳೇನೋ ಚೆನ್ನಾಗಿದ್ದವು, ವಾದಿರಾಜರಿಗೆ ತೃಪ್ತಿಯನ್ನೂ ತಂದಿತು. ಸಂಗ್ರಹಿಸಿದ ಹಣ ಸಾಲದೆ ಅಷ್ಟೊಂದು ಮೊತ್ತದ ಖರ್ಚನ್ನು ಭರಿಸಲು ವಾದಿರಾಜರು ಕೈಯಿಂದಲೂ ಹಣ ಹಾಕಬೇಕಾಯಿತು. ಹಣ ಖರ್ಚಾಗಿದ್ದಕ್ಕೆ ಯೋಚಿಸಲಿಲ್ಲವಾದರೂ, ಇಂತಹ ಕಾರ್ಯಕ್ರಮಗಳನ್ನು ಮುಂದೆ ಮಾಡಲು

ಜನ, ಧನ ಸಹಾಯ ಅಪಾರವಾಗಿ ಬೇಕೆಂಬ ಅರಿವಾಗಿತ್ತು. ಶಿಲ್ಪಕಲಾ ಪ್ರತಿಷ್ಠಾನದಂತಹ ಚಿಕ್ಕ ಸಂಸ್ಥೆಗೆ ಇಂತಹ ಕಾರ್ಯಕ್ರಮಗಳು ದುಬಾರಿ ಎನಿಸಿದವು. ಬರೀ ಕಾರ್ಯಕ್ರಮಗಳನ್ನು ನಡೆಸುತ್ತಿದ್ದುದರಿಂದ ದೈನಂದಿನ ಕೆಲಸಗಳನ್ನು ಮಾಡಲು ಸಮಯ ಸಾಲದಾಯಿತು. ಒಪ್ಪಿಕೊಂಡಿದ್ದ ಕೆಲಸಗಳ ಒತ್ತಡ ಮತ್ತು ಹಣದ ಅಭಾವದಿಂದ ಶಿಲ್ಪಕಲಾ ಪ್ರತಿಷ್ಠಾನದ ಕಾರ್ಯಗಳು ಸ್ಥಗಿತಗೊಂಡವು. ಇಂತಹ ಜವಾಬ್ದಾರಿಯ ಕೆಲಸಗಳಿಗೆ ಒಬ್ಬರಾದರೂ ತಮ್ಮ ಪೂರ್ಣ ಸಮಯವನ್ನು ಮೀಸಲಿಡಬೇಕಿತ್ತು. ಹೀಗಾಗಿ ಚಟುವಟಿಕೆಗಳು ಸ್ಥಗಿತಗೊಂಡವು.

## ಎಲ್ಲೋರ - ಪೂನ - ಶಿಬಿರಗಳು

1990ರಲ್ಲಿ ಮತ್ತೆ ನಾಗಪುರದ ದಕ್ಷಿಣ ಮಧ್ಯವಲಯ ಸಾಂಸ್ಕೃತಿಕ ಕೇಂದ್ರದವರು ಎಲ್ಲೋರದಲ್ಲೊಂದು ಶಿಬಿರ ಅಥವಾ ಕಾರ್ಯಾಗಾರವನ್ನು ಏರ್ಪಡಿಸಿದರು. ಎಂದಿನಂತೆ ವಾದಿರಾಜರು ನಿರ್ದೇಶಕರಾಗಿದ್ದು, ನಾವೆಲ್ಲರೂ ಜೊತೆಯಲ್ಲಿ ಹೊರಟೆವು. ವಾದಿರಾಜರಿಗೆ ಆಗಾಗ ಹೊಟ್ಟೆನೋವು ಬಂದು ನಿಶ್ಯಕ್ತರಾಗುತ್ತಿದ್ದರು. ಎಲ್ಲೋರದ ಎಲ್ಲ ಗವಿಗಳನ್ನೂ ಸುತ್ತಿ ನೋಡಲು ಅವರಿಗೆ ಆಗಲಿಲ್ಲ. ಶಿಲ್ಪಿಗಳಿಗೆ ತಮ್ಮದೇ ಆದ ತೊಂದರೆಯಿರುತ್ತದೆ. ಸರ್ಕಾರವಾದರೂ ಇಂತಹ ಕ್ಷೇತ್ರಗಳನ್ನು ಸಂದರ್ಶಿಸಲು ಶಿಲ್ಪಿಗಳಿಗೇ ಅವಕಾಶ ಮಾಡಿಕೊಡಬೇಕು ಎಂದು ಭಾವಪೂರ್ಣವಾಗಿ ತಮ್ಮ ಭಾಷಣದಲ್ಲಿ ತಮ್ಮ ನೋವನ್ನು ತೋಡಿಕೊಂಡರು. ಎಲ್ಲೋರದಂತಹ ಕ್ಷೇತ್ರವನ್ನು ತಮಗೆ ನೋಡಲಾಗಲಿಲ್ಲವೆಂಬ ಕೊರಗು ಅವರನ್ನು ಬಹಳ ಬಾಧಿಸಿತು. ಅದಾದ ಒಂದೇ ತಿಂಗಳಲ್ಲಿ ಪೂನದಲ್ಲಿ "ಭಾವಶಿಲ್ಪ ಶಿಬಿರ" ನಡೆಯಿತು. ಇದರಲ್ಲಿ ಪೂನಾದಲ್ಲಿದ್ದ ಕೆಲವು ಕಲಾವಿದರು, ಗಾಯಕರು ನೃತ್ಯಪಟುಗಳು, ವಿದ್ವಾಂಸರು ಇಂತಹವರ ಭಾವಶಿಲ್ಪವನ್ನು ಸೆರೆಹಿಡಿಯುವಂತೆ ಮಾಡಬೇಕೆಂದು ಯೋಜಿಸಿದ್ದರು. ವಾದಿರಾಜರೇ ಈ ಶಿಬಿರದ ನಿರ್ದೇಶಕರು. ಕಥಕ್ ನೃತ್ಯ ಕಲಾವಿದೆ ಶ್ರೀಮತಿ ರೋಹಿಣಿ ಭಾಟೆ, ರಂಗಕಲಾವಿದೆ ಶ್ರೀಮತಿ ಜ್ಯೋತ್ಸ್ನಾ ಭೋಳೆ, ರಂಗಕಲಾವಿದರೂ ನಿರ್ದೇಶಕರೂ ಆದ ಶ್ರೀ ಕಮಲಾಕರ್ ಸೊಂಟಕ್ಕಿ,

ಲೇಖಕ ಶ್ರೀ ವೆಂಕಟೇಶ ಮಾಲಗೂಡ್ಕರ್, ಸ್ವತಃ ವಾದಿರಾಜರು ಸಹ ಇದ್ದರು, ಇವರುಗಳೆಲ್ಲ ರೂಪದರ್ಶಿಗಳಾಗಿದ್ದರು. ಅವರಂತೆ ಮಾಡುವುದೇ ಪ್ರಯಾಸವಾಗಿ, ಅವರ ಭಾವವನ್ನು, ಭಾವನೆಯನ್ನು ಶಿಲ್ಪದಲ್ಲಿ ಸೆರೆಹಿಡಿಯಲಾಗಲಿಲ್ಲ. ವಾದಿರಾಜರಿಗೆ ಈ ಶಿಬಿರ ತೃಪ್ತಿ ಕೊಡಲಿಲ್ಲ.

ಇದಾದ ನಂತರ ಭಾಗವಹಿಸಿದ ಕೊನೆಯ ಶಿಬಿರ ಕಾಕತೀಯರ ಓರಂಗಲ್‌ನದು, 1991ರಲ್ಲಿ ಆರೋಗ್ಯ ಸ್ವಲ್ಪ ಸುಧಾರಿಸಿದ್ದರೂ, ಕಾಕತೀಯ ಶೈಲಿ ಅಷ್ಟೊಂದು ಆಕರ್ಷಣೀಯವಾಗಿರಲಿಲ್ಲ. ಇದರಿಂದಲೂ ಅವರಿಗೆ ಅಷ್ಟೊಂದು ಸಂತೋಷವಾಗಿರಲಿಲ್ಲ.

## ಕ್ಷೀಣಿಸಿದ ಆರೋಗ್ಯ

1990ರಲ್ಲಿ ಪೂನಾದ ಭಾವಶಿಲ್ಪ ಶಿಬಿರವನ್ನು ಫೆಬ್ರವರಿಯಲ್ಲಿ ನಡೆಸಿದರು. ಆ ಸಂದರ್ಭದಲ್ಲಿ ಕಾರ್ಲಾ ಭಾಜಾ, ಗುಹೆಗಳನ್ನು ನೋಡಲು ಹೋದಾಗಲೂ, ಆ ಬೆಟ್ಟಗಳನ್ನು ಹತ್ತಲಾಗದೆ ವಾದಿರಾಜರು ನೊಂದರು. ಬೋಯಿಗಳ ಸಹಾಯದಿಂದ ತೊಟ್ಟಿಲಲ್ಲಿ ಕುಳಿತು ಕಾರ್ಲಾ, ಭಾಜಾ ಗುಹೆಗಳ ಬೌದ್ಧರ ಕಾಲದ ಶಿಲ್ಪವನ್ನು ನೋಡಿ ಆನಂದಪಟ್ಟರು. ಮರುಜನ್ಮವೆಂಬುದಿದ್ದರೆ ಮತ್ತೆ ಶಿಲ್ಪಿಯಾಗಿಯೇ ಹುಟ್ಟಿ ಭಾರತಾದ್ಯಂತ ಇರುವ ಶಿಲ್ಪಸಿರಿಯನ್ನು ಕಣ್ಣಾರೆ ನೋಡಿ ಆನಂದಿಸಬೇಕು ಎಂದು ನುಡಿದರು. ಮತ್ತೆ ಬೆಂಗಳೂರಿಗೆ ಬರುವ ವೇಳೆಗೆ Art in Action ಉತ್ಸವ ಸಿದ್ಧತೆ ನಡೆಸಬೇಕಿತ್ತು. ಸಮಯದ ಅಭಾವದಿಂದ 3 ಕೆಂಪು ಕಲ್ಲಿನ ಶಿಲ್ಪಗಳನ್ನು ಮಾತ್ರ ಸಿದ್ಧಪಡಿಸಿದರು. ಲಂಡನ್ನಿನಲ್ಲಿ ಶ್ರಮವಿರುವುದಿಲ್ಲ, ಇಲ್ಲಿಯಂತೆ ಕೆಲಸದ ಒತ್ತಡಗಳೂ ಇರುವುದಿಲ್ಲ, ಜೊತೆಗೆ ಪ್ರಿಯ ಮಿತ್ರರಿರುತ್ತಾರೆ, ಒಂದು ರೀತಿಯಲ್ಲಿ ಮನಸ್ಸಿಗೂ ಮೈಗೂ ವಿಶ್ರಾಂತಿ ದೊರೆಯುವುದೆಂದು ಆಲೋಚಿಸಿ ಲಂಡನ್ನಿಗೆ ಹೊರಟರು. ಈ ಮೂರು ತಿಂಗಳ ಅವಧಿಯಲ್ಲಿ ಬೆಂಗಳೂರಿಗೆ 'Hotel Gateway' (Residency Road) ಗೆ ಎರಡು ಕಲ್ಲಿನ ಆನೆಗಳನ್ನು ( 36 ಅಡಿ ಎತ್ತರದ್ದು ) ಮಾಡಿದರು. ಹೆಚ್ಚಿನ ಕೆಲಸ ಮಾಡಲಾಗದಿದ್ದರೆ, ಶಿಷ್ಯರ ಕೈಲೇ ಮಾಡಿಸಿ, ಅವಶ್ಯಕತೆ ಬಿದ್ದಾಗ ತಾವೂ ಕೈಹಾಕಿದ್ದರು. ಇದೆಲ್ಲದರಿಂದ ಬಹಳವಾಗಿ

ಆಯಾಸವೇನೊ ಆಗಿತ್ತು. ಆದರೆ ತೋರಿಸಿಕೊಳ್ಳದೆ ಲಂಡನ್ನಿಗೆ ಹೊರಟರು. ಆದರೆ ಮೊದಲ ದಿನದ ಪ್ರದರ್ಶನದಲ್ಲೇ ತಮ್ಮನ್ನು ಅಲಂಕರಿಸುತ್ತಿದ್ದಾಗ ತಲೆ ಸುತ್ತಿ ಬಿದ್ದರು. ಕೂಡಲೇ ಒಳ್ಳೆಯ (ಅತ್ಯಂತ ದುಬಾರಿ) ಚಿಕಿತ್ಸಾಲಯಕ್ಕೆ ಸೇರಿಸಿ 15 ದಿನಗಳ ಕಾಲ ಶುಶ್ರೂಷೆನಡೆಸಿ, ಗುಣಪಡಿಸಿ ಭಾರತಕ್ಕೆ ಕಳುಹಿಸಿದರು. ಹೃದಯದ ಒಂದು ಕವಾಟ ಕೆಲಸ ಮಾಡುತ್ತಿರಲಿಲ್ಲವಾಗಿ ಈ ತೊಂದರೆ ಪ್ರಾರಂಭವಾಗಿತ್ತು. ಆಯಾಸವಾಗುವ ಯಾವ ಕೆಲಸಗಳನ್ನೂ ಮಾಡಬಾರದೆಂದು ಹೇಳಿದ್ದರಲ್ಲದೆ, ಆಹಾರ ವಿಹಾರಗಳಲ್ಲೂ ಪಥ್ಯ ಹೇಳಿದ್ದರು. ಅದರಂತೆ ಕೆಲವೇ ತಿಂಗಳಲ್ಲಿ, ಗುಣಮುಖಿರಾಗಿ ಮುಂದಿನ ವರ್ಷ ಲಂಡನ್ನಿನ ಉತ್ಸವಕ್ಕೂ ಹೋಗಿ, ತಮ್ಮನ್ನು ಕಾಪಾಡಿದವರಿಗೆಲ್ಲ ಕೃತಜ್ಞತೆಗಳನ್ನು ಅರ್ಪಿಸಿದರು. ಅವರಿಗೆಲ್ಲ ವಾದಿರಾಜರು ಎಂದಿನಂತೆ ಉತ್ಸವದಲ್ಲಿ ಭಾಗವಹಿಸಿದ್ದು ಬಹಳ ಸಂತೋಷವನ್ನುಂಟು ಮಾಡಿತ್ತು. ಈ ಬಾರಿ, ಅಲ್ಲಿಯ ಹವೆಯಿಂದ, ಅಲ್ಲಿ ಪಡೆದ ವಿಶ್ರಾಂತಿಯಿಂದ, ಬೇಕಾದವರನ್ನೆಲ್ಲಾ ನೋಡಿ ಬಂದ 1991ರಲ್ಲಿ ಮೊದಲ ಬಾರಿಗೆ ರಾಜ್ಯದ ಲಲಿತಕಲಾ ಅಕಾಡೆಮಿ ಸದಸ್ಯರಾಗಿ ನೇಮಕಗೊಂಡರು. ಸಂತೋಷದಿಂದ ಇನ್ನಷ್ಟು ಸುಧಾರಿಸಿತು.

## ಅಪೂರ್ಣ 'ಗಿರಿಜಾ ಕಲ್ಯಾಣ - ಗಂಗಾ'

ಲಂಡನ್ನಿನ ಆಶ್ರಮವೊಂದಕ್ಕಾಗಿ 6 ಅಡಿಯ ಕಲ್ಲಿನ ಗಂಗಾ ವಿಗ್ರಹವನ್ನು ಕೇಳಿದ್ದರು. ಎಲ್ಲೋರದ "ಗಂಗಾ" ಸ್ಫೂರ್ತಿಯಿಂದ 'ಗಂಗಾ' ರೇಖಾಚಿತ್ರಕ್ಕಾಗಿ ಅವರು ವಹಿಸಿದ ಶ್ರದ್ಧೆ, ತೆಗೆದುಕೊಂಡ ಕಾಲ, ಅದರಲ್ಲೂ ಹಗಲು ರಾತ್ರಿಗಳ ಪರಿವೆಯೇ ಇಲ್ಲದೆ, ಅದರಲ್ಲೇ ಮುಳುಗಿದ್ದರೆಂದರೆ ಅತಿಶಯೋಕ್ತಿಯಾಗಲಾರದು. ಎರಡು ಮೂರು ರೀತಿಯ ರೇಖಾ ಚಿತ್ರಗಳು ಸಿದ್ಧವಾದವು. ಎಲ್ಲವೂ ಸುಂದರವಾಗಿ ಬಂದಿದ್ದು ಬಹಳ ತೃಪ್ತಿ ತಂದಿತ್ತು. ವಿಗ್ರಹ ಮಾಡಿದರೆ ಹೇಗಿರಬಹುದೆಂದು ಕನಸು ಕಾಣಲಾರಂಭಿಸಿದರು. ಕಲಾವಿದನೊಬ್ಬ ತಾನು ಮಾಡುವ ಕೃತಿಗೆ ತನ್ನ ಪ್ರಾಣವನ್ನೇ ತುಂಬುತ್ತಾನೆ ಎನ್ನುವ ಮಾತನ್ನು ಕೇಳಿದೆ. ಅದು ಉತ್ಪ್ರೇಕ್ಷೆ ಎನಿಸುತ್ತಿತ್ತು. ಆದರೆ ವಾದಿರಾಜರ 'ಗಂಗಾ' ರೇಖಾಚಿತ್ರ ಮಾಡಲು ತೆಗೆದುಕೊಂಡ 3 ತಿಂಗಳ ಕಾಲದಲ್ಲಿ ಆ ಮಾತಿನ ಸತ್ಯ ಅರಿವಾಗಿತ್ತು.



ಗಂಗಾ

ಅಷ್ಟೊಂದು ತನ್ಮಯತೆ, ಏಕಾಗ್ರತೆ ಮತ್ತೆ ಬೇರೆ ಏನೂ ಪರಿವೆಯೇ ಇರಲಿಲ್ಲ ಎನ್ನಬಹುದು. ಒಂದೊಂದು ರೇಖೆಯಲ್ಲೂ ಜೀವವನ್ನು ನೋಡುತ್ತಿದ್ದರು. 'ಗಂಗಾ' ಅವರ ಮಟ್ಟಿಗೆ ಬರೀ ರೇಖಾಚಿತ್ರವಾಗಿರಲಿಲ್ಲ. ಜೀವ ತುಂಬಿ ನಿಂತ ದೇವತೆಯಾಗಿದ್ದಳು. ಅದರ ಶಿಲ್ಪವನ್ನು ಮಾಡುವ ಬಯಕೆ ಉತ್ಕಟವಾಗಿತ್ತು. 6 ಅಡಿ ಎತ್ತರದ ಕಲ್ಲು ಇರಲಿಲ್ಲ. 2 ಅಡಿ ಎತ್ತರದ ಕಲ್ಲಿನಲ್ಲೇ ಒಂದು ಶಿಲ್ಪ

ಪ್ರಾರಂಭಿಸಿದರು. ಅದೂ ಅಪೂರ್ಣವಾಯಿತು. ಶ್ರೀ ಎಂ.ವೈ. ಘೋರ್ಪಡೆಯವರಿಗಾಗಿ "ಗಿರಿಜಾ-ಕಲ್ಯಾಣ" ರೇಖಾಚಿತ್ರ ಮಾಡುತ್ತಿದ್ದರು. ಅದೂ ಅರ್ಧದಲ್ಲೇ ನಿಂತಿತು. ಜೊತೆಗೆ ದೇಶದಲ್ಲಿ ನಡೆದ ಅಯೋಧ್ಯ ಗಲಭೆಯ ಬಗ್ಗೆ ಕಲಾವಿದರೆಲ್ಲ ಸೇರಿ ತಮ್ಮ ಅನುಕಂಪವನ್ನು ತಮ್ಮ ಮಾಧ್ಯಮಗಳ ಮೂಲಕ ಮಾಡಿ ತೋರಿಸುವ ಒಂದು ದಿನದ ಕಾರ್ಯಕ್ರಮವಿತ್ತು. ಇದು ಅಯೋಧ್ಯ ಘಟನೆ ನಡೆದ ಮೇಲೆ ಜನವರಿ 18ರಂದು ನಡೆಯಲಿತ್ತು. ಅದರಲ್ಲಿ ಭಾಗವಹಿಸುವ ಸಲುವಾಗಿ "ಹಿಂದೂ ಮುಸ್ಲಿಂ ಬಾಂಧವ್ಯ"ದ ಪ್ರತೀಕವಾಗಿ ಕಾಶಿಯ ವಿಶ್ವೇಶ್ವರ ಮಂದಿರ ಮತ್ತು ಉಸ್ತಾದ್ ಬಿಸ್ಮಿಲ್ಲಾಖಾನ್‌ರವರ ರೇಖಾಚಿತ್ರ ತಯಾರಿಸಿದ್ದರು. ಅದನ್ನು ಅವರು ಯಾವಾಗಲೂ ಚಿತ್ರ ಬರೆಯಲು ಬಳಸುತ್ತಿದ್ದ ಬೋರ್ಡಿನ ಮೇಲೆ ಸೀಮೆ ಸುಣ್ಣದಿಂದ ಮಾತ್ರ ಬರೆದಿದ್ದರು. ಅಷ್ಟು ಚಿತ್ರದಲ್ಲೇ ಒಂದು ಆಕರ್ಷಣೆಯಿತ್ತು. ಅದೂ ಕೂಡ ಮಾಡಲಾಗಲಿಲ್ಲ. ಜನವರಿ 18ರ ಬೆಳಿಗ್ಗೆಯೇ ಆರೋಗ್ಯ ಸರಿಯಿಲ್ಲದೆ ಮಲಗಿದರು. ಈ ಕಾರ್ಯಕ್ರಮಕ್ಕೂ ಹೋಗಲಾಗಲಿಲ್ಲ.

ಇದರ ಜೊತೆಗೆ ಅವರ ಪತ್ನಿಯವರೂ ಮಲಗಿದರು. ಮೊದಲೇ ಅವರಿಗೆ ಕಣ್ಣಿನ ತೊಂದರೆಯಿತ್ತು. ಜೊತೆಗೆ ದೈಹಿಕವಾಗಿಯೂ ಅಷ್ಟೊಂದು ಆರೋಗ್ಯವಾಗಿರಲಿಲ್ಲ. ಆ ಸಮಯದಲ್ಲಿ ಅವರಿಬ್ಬರಿಗೂ ಸೇವೆ ಮಾಡುವ ಸೌಭಾಗ್ಯ ನನಗೆ ದೊರೆಯಿತು. ಅವರ ಪತ್ನಿಯ ಆರೋಗ್ಯ ಸ್ವಲ್ಪ ಸುಧಾರಿಸಿದರೂ, ವಾದಿರಾಜರು ಮಾತ್ರ ಪೂರ್ತಿ ಹಾಸಿಗೆ ಹಿಡಿದರು.

## ಕೊನೆಯುಸಿರು

ದಕ್ಷಿಣ ಮಧ್ಯವಲಯ ಸಾಂಸ್ಕೃತಿಕ ಕೇಂದ್ರದವರು ಸಂಪ್ರದಾಯ ಶಿಲ್ಪ ಶಿಬಿರಗಳ ಮಾಲೆಯ ಕೊನೆಯ ಶಿಬಿರವನ್ನು 1992ರ ಫೆಬ್ರವರಿಯಲ್ಲಿ ಆಯೋಜಿಸಿದ್ದರು. 1991ರ ನವೆಂಬರ್‌ನಿಂದಲೇ ಇವರ ಆರೋಗ್ಯ ಅಷ್ಟೊಂದು ಸಮರ್ಪಕವಾಗಿರಲಿಲ್ಲ. ಇವರನ್ನೆ ನಿರ್ದೇಶನ ಮಾಡಲು ಕೇಳಿದಾಗ ದೂರ ಪ್ರಯಾಣ ಮಾಡಲು ಸಾಧ್ಯವಿಲ್ಲವೆಂದು ತಮ್ಮ ಬದಲಿಗೆ ನನ್ನನ್ನು ನನ್ನ ಜೊತೆ ಸಹ ನಿರ್ದೇಶಕರಾಗಿ ಶ್ರೀ ಜಿ.ಎಲ್. ಭಟ್ ಮತ್ತು ಶ್ರೀ ವೆಂಕಟರಮಣಭಟ್

ಅವರನ್ನು ತೆಗೆದುಕೊಳ್ಳಬಹುದೆಂದು ಇಲಾಖೆಗೆ ಬರೆದು ತಿಳಿಸಿದ್ದರು. ಅದರಂತೆ ನಾವು ಮೂವರು ಫೆಬ್ರವರಿ 8ನೇ ತಾರೀಖು ಖಜುರಾಹೋಗೆ ಹೊರಡ ಬೇಕಾಯಿತು. ಅದೇ ನಮಗೆ ಗುರುಗಳ ಕೊನೆಯ ದರ್ಶನವಾಗುವುದೆಂದು ತಿಳಿದಿರಲಿಲ್ಲ. ಅವರನ್ನು ನೋಡಿಕೊಳ್ಳುತ್ತಿದ್ದ ವೈದ್ಯರು ಶ್ರೀಸ್ವಾಮಿಯವರು ಭರವಸೆ ಕೊಟ್ಟಿದ್ದರು. ಹೊರಡುವ ಸಮಯದಲ್ಲಿ ಕಾಲು ಮುಟ್ಟಿ ನಮಸ್ಕರಿಸಿದೆ. ವಾದಿರಾಜರು ಖಿನ್ನರಾಗಿದ್ದರು. ತಲೆಯಮೇಲೆ ಕೈಯಿಟ್ಟು ಆಶೀರ್ವದಿಸಿದರು. ನನಗೆ ಅಳು ಉಕ್ಕಿ ಬರುತ್ತಿತ್ತು. ಇಂತಹ ಸ್ಥಿತಿಯಲ್ಲಿ ಹೇಗೆ ಬಿಟ್ಟು ಹೋಗುವುದು ಬಹಳ ದುಃಖವಾಗಿತ್ತು. "ನೀವು ಬೇಡವೆಂದರೆ ಈಗಲೂ ಹೋಗುವುದನ್ನು ನಿಲ್ಲಿಸುತ್ತೇವೆ, ಅಷ್ಟುದೂರ, ಅದೂ 21ದಿನ ಹೇಗೆ ಇರುವುದು?" ಎಂದು ಕೇಳಿದೆ.

"ಬೇಡಾರಿ ಈ ಶಿಬಿರಕ್ಕೆ 6 ತಿಂಗಳಿಂದ ವ್ಯವಸ್ಥೆ ಮಾಡಿದ್ದಾರೆ. ದೇಶದ ಎಲ್ಲ ಕಡೆಯಿಂದಲೂ ಶಿಲ್ಪಿಗಳು ಬರುತ್ತಾರೆ. ನನ್ನೊಬ್ಬನಿಗೋಸ್ಕರ ಅವರಿಗೆಲ್ಲ ಏಕೆ ಈ ಅವಕಾಶ ತಪ್ಪಬೇಕು ? ನೀವು ಹೋಗಿ ಬನ್ನಿ, ಏನೂ ಆಗುವುದಿಲ್ಲ, ನೀವು ಹೋಗಿ ಬನ್ನಿ ಯೋಚಿಸಬೇಡಿ" ಎಂದರು. ಅಂತಹ ಅನಾರೋಗ್ಯದ ಪರಿಸ್ಥಿತಿಯಲ್ಲೂ ತಮಗಿಂತ, ಬೇರೆಯ ಶಿಲ್ಪಿಗಳಿಗೆಲ್ಲ ಸಿಕ್ಕ ಅವಕಾಶ ತಪ್ಪಿಸಬಾರದು, ಇಂತಹ ಅವಕಾಶ ಸಿಗುವುದೇ ಅಪರೂಪವಲ್ಲವೆ ಎಂಬ ಕಳಕಳಿ.

ಖಜುರಾಹೋದ ಶಿಬಿರ ಮುಗಿದ ದಿನವೇ ಅಂದರೆ ಫೆಬ್ರವರಿ 27ರಂದು ವಾದಿರಾಜರು ಕೊನೆಯುಸಿರೆಳೆದಿದ್ದರು. ಕೊನೆಯವರೆಗೂ ಅವರನ್ನು ನೋಡಿಕೊಳ್ಳುವ ಭಾಗ್ಯ, ಅವರ ಮಗ ಸುಬ್ಬಣ್ಣ, ನನ್ನ ಮಗಳು ಮತ್ತು ಯಜಮಾನರಿಗೆ ಸಿಕ್ಕಿತ್ತು. ನಾಡಿನ ಹಿರಿಯ ಕಲಾವಿದನನ್ನು, ಅಂತರರಾಷ್ಟ್ರೀಯ ಮಟ್ಟಕ್ಕೆ ನಾಡಿನ ಹೆಸರನ್ನು ಬೆಳಗಿಸಿದ ಕಲಾವಿದನನ್ನು, ರಾಜ್ಯದ ಸಕಲ ಮರ್ಯಾದೆಗಳೊಡನೆ, ಬೀಳ್ಕೊಟ್ಟಿತ್ತು. ಅಭಿಮಾನಿಗಳ ಗುಂಪೇ ನೆರೆದಿತ್ತು. "ಮರಣದಲ್ಲೂ ಮೆರೆದರು" ಎಂದು ನನ್ನ ಮಗಳು ಹೇಳುತ್ತಿರುತ್ತಾಳೆ. ಅಂತೂ ಜೀವನದ ಉದ್ದಕ್ಕೂ ಹೋರಾಟ ನಡೆಸಿದ ಒಂದು ಸಾರ್ಥಕ ಜೀವ ಅನಂತದಲ್ಲಿ ಲೀನವಾಗಿತ್ತು.

## ವಾದಿರಾಜರ ಅಪೂರ್ವ ಕಲಾದೃಷ್ಟಿ

ವಾದಿರಾಜರು ಮರೆಯಾದರೂ ಅವರ ಕೃತಿಗಳು ನಮ್ಮೊಡನೆ ಇವೆ. ಅವರ ಅಧ್ಯಯನದ ರೀತಿ, ಅವರ ಸಾಹಸದ ಬಾಳು ಕಿರಿಯರಿಗೆ ದಾರಿದೀಪವಾಗಿವೆ. ಅವರು ಕೃತಿಗಳನ್ನು ರಚಿಸುತ್ತಿದ್ದ ರೀತಿಯೇ ಭಿನ್ನವಾದುದು. ಸುಮಾರು ಇಪ್ಪತ್ತೈದು ಮೂವತ್ತು ವರ್ಷಗಳ ಕಾಲ (1964ರಿಂದ - 1992 ರವರೆಗೆ) ಅವರಲ್ಲಿ ಕಲಿತು, ಅವರ ಜೊತೆಯಲ್ಲಿಯೇ ಕೆಲಸ ಮಾಡುತ್ತಿದ್ದುದರಿಂದ ಅವರು ಕೃತಿ ರಚಿಸುವ ವಿಧಾನ, ಪೂರ್ವಸಿದ್ಧತೆ, ರಚಿಸುವಾಗಿನ ಮನಃಸ್ಥಿತಿ ಎಲ್ಲವನ್ನೂ ಗಮನಿಸುತ್ತಿದ್ದೆ. 1977ರಿಂದ ಅವರು ವಾಸಿಸುತ್ತಿದ್ದ ಮನೆಯ ಒಂದು ಭಾಗದಲ್ಲೂ ನನ್ನ ಸಂಸಾರಕ್ಕೂ ವಾಸಿಸಲು ಅವಕಾಶ ಸಿಕ್ಕಿದ್ದು ಇನ್ನಷ್ಟು ಆಳವಾಗಿ ಅವರನ್ನು ಅರಿತುಕೊಳ್ಳಲು ಸಾಧ್ಯವಾಯಿತು. ಹಾಗಾಗಿ ಇದರ ಬಗ್ಗೆ ಬರೆಯದಿದ್ದರೆ ನನ್ನ ಬರವಣಿಗೆ ಅಪೂರ್ಣವಾಗುತ್ತದೆ.

ದಿನನಿತ್ಯದ ಚಟುವಟಿಕೆಗಳಲ್ಲೂ ಸಹ ಕಲೆಗೇ ಬಹಳ ಮಹತ್ವ ಕೊಟ್ಟಿದ್ದರು. ಬಾಲ್ಯದಲ್ಲಿಯೇ ತಂದೆ ತಾಯಿಗಳನ್ನು ಕಳೆದುಕೊಂಡು, ಶಾಲೆಯ ಶಿಕ್ಷಣಕ್ಕೂ ಅವಕಾಶವಿಲ್ಲದ ಒಬ್ಬ ಬಾಲಕ, ವೃತ್ತಿ, ಪ್ರವೃತ್ತಿಗಳನ್ನು ಸರಿದೂಗಿಸಿಕೊಂಡು ಬಂದಿದ್ದೇ ಒಂದು ಸಾಹಸ. ಹುಟ್ಟಿನಿಂದಲೇ ಬಂದಿದ್ದ ಕಲಾಭಿರುಚಿ, ಅದನ್ನು ಮೈಗೂಡಿಸಿಕೊಳ್ಳುವ ತೀವ್ರ ಆಸಕ್ತಿಯೇ ಅವರನ್ನು ನಿಯಂತ್ರಿತ ಮನೋಭಾವಕ್ಕೆ ಒಳಪಡಿಸಿತ್ತೆನ್ನಬಹುದು. ಇಂತಹ ಮನೋಭಾವ, ಸಾಧಿಸುವ ಛಲ, ಮತ್ತು ಅದಕ್ಕೆ ಬೇಕಾದ ಮಾನಸಿಕ ಸಮತೋಲನ ವ್ಯಕ್ತಿಗಳಲ್ಲಿ ಮೈಗೂಡುವುದೇ ವಿರಳ. ಆದ್ದರಿಂದಲೇ ಜೀವನದ ಉದ್ದಕ್ಕೂ ವಾದಿರಾಜರು ಅಧ್ಯಯನಶೀಲರಾಗಿದ್ದರು. ಯಾವ ವಿಷಯವೇ ಆಗಲಿ ಸಂಗೀತ, ಸಾಹಿತ್ಯ, ಲಲಿತಕಲೆಗಳು, ಕೊನೆಗೆ ಆಧ್ಯಾತ್ಮ, ಹೀಗೆ ಎಲ್ಲ ವಿಷಯಗಳಲ್ಲೂ ಅವರಿಗೆ ತೀವ್ರವಾದ ಆಸಕ್ತಿ.

ಕಲೆಯನ್ನು ಅಧ್ಯಯನ ಮಾಡಿದ ರೀತಿ ಪವಾಡ ಒಂದು ವಿಶೇಷವೆನ್ನಬಹುದು. ತಮಗೆ ತಾವೇ ಒಂದು ಗುರಿಯನ್ನು ಹಾಕಿಕೊಂಡು

ಅದಕ್ಕಾಗಿ ಶ್ರಮಿಸುತ್ತಿದ್ದರು. ಆರಂಭದ ದಿನಗಳಲ್ಲಿ ಅಂದರೆ, ಮೂವತ್ತರ ಪ್ರಾಯದಲ್ಲಿ ಪಾಶ್ಚಾತ್ಯ ಶಿಲ್ಪಿಗಳು ಅವರನ್ನು ಬಹಳ ಆಕರ್ಷಿಸಿದ್ದವು. ಮೈಕೇಲ್ ಏಂಜಲೋವಿನಂತೆ ಒಂದು ಶಿಲ್ಪ ರಚಿಸಿದರೆ ಸಾಕು ಎಂದು ಗುರಿ ಇಟ್ಟುಕೊಂಡಿದ್ದರಂತೆ. ಮುಂದೆ ಪಾಶ್ಚಾತ್ಯರ ರಿಯಲಿಸ್ಟಿಕ್ ಶೈಲಿಯೂ ಅಲ್ಲದ ಸಂಪ್ರದಾಯ ಶೈಲಿಗೂ ಸೇರದ ಹಲವಾರು ಕೃತಿಗಳನ್ನು ರಚಿಸಿದರು. ಯಶೋಧರ, ಶಿವಪಾರ್ವತಿ, ಅಂಬೆಗಾಲಿಕ್ಕುವ ಗಣೇಶ ಮುಂತಾದ ಕೃತಿಗಳನ್ನು ಮಣ್ಣಿನಿಂದ ರಚಿಸಿ, ಪ್ಲಾಸ್ಟರ್ ಹಾಗೂ ಪಿಂಗಾಣಿಯಲ್ಲೂ ತಯಾರಿಸಿ ಮಾರಾಟ ಮಾಡುತ್ತಿದ್ದರು. ಈ ಸಂದರ್ಭದಲ್ಲೇ ಹರಿಹರ್ರವರ ಪರಿಚಯವಾಗಿ ಭಾರತೀಯ ಶಿಲ್ಪ ಶೈಲಿಗಳ ಅಧ್ಯಯನ ಪ್ರಾರಂಭವಾದದ್ದು. ಅನುಕರಣೆಯಿಂದಲೇ ಅಧ್ಯಯನ ಆರಂಭಿಸಿದರು, ಆದರೆ ಅನುಕರಣೆಯ ಮಟ್ಟಕ್ಕೆ ತಮ್ಮನ್ನು ಸೀಮಿತಗೊಳಿಸಿಕೊಳ್ಳಲಿಲ್ಲ. ಪುರಾತನ ಶೈಲಿಗಳನ್ನೆಲ್ಲ ಅನುಕರಣ ಮಾಡಿ ಅಧ್ಯಯನ ಮಾಡಲು ಕೇವಲ ಮೂವತ್ತು ನಲವತ್ತು ವರ್ಷಗಳಲ್ಲಿ ಸಾಧ್ಯವೆ ? ತಮಗೆ ದೊರೆತ ಬೇಡಿಕೆಗಳ ಮೂಲಕವೇ ಇಂತಹ ಅಧ್ಯಯನವನ್ನೂ ನಡೆಸಬೇಕಿತ್ತು. ಹೀಗಾಗಿ ಪ್ರತಿಯೊಂದು ಶಿಲ್ಪ ರಚಿಸುವಾಗಲೂ, ಅದು ಸಣ್ಣದಿರಲೀ, ದೊಡ್ಡದಿರಲೀ, ವಿಶೇಷ ಎಚ್ಚರಿಕೆಯಿಂದ ಮಾಡುತ್ತಿದ್ದರು, ಅನುಕರಣೆಯ ಹಂತವನ್ನೂ ಮೀರಿ ಕ್ರಿಯಾಶೀಲತೆಯ ಮಟ್ಟಕ್ಕೆ ಹೋಗಲು ಪ್ರಯತ್ನಿಸುತ್ತಿದ್ದರು.

ಅಧ್ಯಯನವೇ ಗುರಿಯಾಗಿಟ್ಟುಕೊಂಡು ತಾವು ಅನುಕರಿಸುತ್ತಿರುವ ಶೈಲಿಯ ಇತರ ಎಲ್ಲಾ ಕೃತಿಗಳನ್ನೂ ಗಮನಿಸುತ್ತಾ ಅವುಗಳ ವಿಶೇಷತೆಯನ್ನೂ ತಮ್ಮ ಕೃತಿಗಳಲ್ಲಿ ಮೂಡಿಸಲು ಪ್ರಯತ್ನಿಸುತ್ತಿದ್ದರು. ಇಂತಹ ಸಮಯದಲ್ಲಿ ಕೆಲವು ಶಿಲ್ಪ ಕ್ಷೇತ್ರಗಳಿಗೂ ಹೋಗಿ ತಾವೇ ಛಾಯಾಚಿತ್ರಗಳನ್ನು ಮಾಡಿಕೊಂಡು ಬರುತ್ತಿದ್ದರು. ಇದಕ್ಕೆ ಬೇಕಾದ ಒಳ್ಳೆಯ ಕ್ಯಾಮೆರಾ, Zoom lens ಎಲ್ಲವನ್ನೂ ತಾವೇ ಇಟ್ಟುಕೊಂಡಿದ್ದರು. ತಮ್ಮ ಕೃತಿಗಳ ಛಾಯಾಚಿತ್ರಗಳನ್ನು ತೆಗೆದಿದ್ದಾರೆ. ಕೆಲಸ ಮಾಡುತ್ತಿದ್ದ ಮಧ್ಯದಲ್ಲಿ ಏನಾದರೂ ಅವಶ್ಯಕತೆ ಬಿದ್ದರೆ ಪ್ರಾಚ್ಯ ಸಂಶೋಧನಾ ಇಲಾಖೆಯ ಪುಸ್ತಕ ಭಂಡಾರಕ್ಕೊ ಮ್ಯೂಸಿಯಂಗೊ ಹೋಗಿ ಮತ್ತೆ ಮತ್ತೆ ನೋಡಿ ಕೆತ್ತನೆ ಮುಂದುವರೆಸುತ್ತಿದ್ದರು. ಇಲ್ಲಿ ಅವರ ಹೊಯ್ಸಳ

ಶೈಲಿಯ ವೇಣುಗೋಪಾಲ, ಕೆಂಪುಕಲ್ಲಿನ ನಾಯಿಕಾ, ನಿಂತಿರುವ ಚಾಲುಕ್ಯ ಶೈಲಿಯ ಗಣೇಶ, ನಟರಾಜ ಮುಂತಾದ ಹಲವಾರು ಕೃತಿಗಳನ್ನು ಉದಾಹರಿಸಬಹುದು. ಅಧ್ಯಯನಕ್ಕಾಗಿ ಮನಸ್ಸನ್ನು ಕೇಂದ್ರೀಕರಿಸಿ, ಜಾಗೃತಗೊಳಿಸಿಕೊಳ್ಳುತ್ತಿದ್ದರು. ''ಇಂತಹ ಅಧ್ಯಯನವನ್ನು ಇನ್ನೂ ಕೆಲವು ವರ್ಷಗಳು ನಡೆಸಿದರೆ ನನ್ನದೇ ಎನ್ನುವ ಶೈಲಿಯನ್ನು ಕಂಡುಕೊಳ್ಳಬಹುದು'' ಎನ್ನುತ್ತಿದ್ದರು. ಹೀಗೆ ಸಂಪ್ರದಾಯದ ಚೌಕಟ್ಟಿನಲ್ಲಿ ತಮ್ಮತನವನ್ನು ಅಳವಡಿಸಿಕೊಳ್ಳುತ್ತಿದ್ದ ಹಂತವನ್ನು ಅವರ ಕೃತಿಗಳಾದ ''ಶಿಲ್ಪಿ'' ಚಾಲುಕ್ಯ ಶೈಲಿಯ ತಲೆಗಳು, ಹಸುವನ್ನೊರಗಿನಿಂತ ಕೃಷ್ಣ, ಗಂಗಾ ಮುಂತಾದ ಶಿಲ್ಪಗಳಲ್ಲಿ ಕಾಣಬಹುದು.

ಶಿಲ್ಪ ರಚಿಸಲು ಅವರು ಅನುಸರಿಸುತ್ತಿದ್ದ ಮೊದಲ ಹೆಜ್ಜೆ ರೇಖಾಚಿತ್ರ. ಇದು ಕೆಲವು ಶಿಲ್ಪಿಗಳಿಗೆ ವಿಚಿತ್ರವೆನಿಸಬಹುದು, ಆದರೆ ಇದರ ಹಿಂದೆ ಅಡಗಿರುವ ಒಂದು ಸೂಕ್ತ ಮಾರ್ಗವನ್ನು ಗುರುತಿಸಲೇಬೇಕು. ಮರ, ಕಲ್ಲುಗಳಂತಹ ಮಾಧ್ಯಮಗಳಲ್ಲಿ ಒಂದು ಚೌಕಟ್ಟಿರುತ್ತದೆ, ಅದಕ್ಕೆ ಮೀರಿ ಹೋದರೆ ಜೋಡಿಸುವುದು, ಅಂಟಿಸುವುದೂ ಯಾವುದಕ್ಕೂ ಅವಕಾಶವಿಲ್ಲ. ಈ ದೃಷ್ಟಿಯಿಂದ ಲಭ್ಯವಿರುವ ಮರದ, ಕಲ್ಲಿನ ಅಳತೆಗೆ ಸರಿಯಾಗಿ ಮೊದಲು ರೇಖಾಚಿತ್ರ ತಯಾರಿಸಲೇ ಬೇಕು. ಶಾಸ್ತ್ರದಲ್ಲೂ ಈ ರೇಖಾಚಿತ್ರದ ಮಹತ್ವದ ಬಗ್ಗೆ ಹೇಳಿ, ಅದರಿಂದಲೇ ಪ್ರಾರಂಭಿಸಬೇಕೆಂದೂ ಕಡ್ಡಾಯ ಮಾಡಿದ್ದಾರೆ. ಧ್ಯಾನಶ್ಲೋಕಗಳಿಗನುಗುಣವಾಗಿ ರೇಖಾಚಿತ್ರಗಳನ್ನು ಮಾಡಿರುವುದನ್ನು ನೋಡಿಲ್ಲವೆ ? ಆದರೂ ಹೆಚ್ಚಿನ ಮಂದಿ ಶಿಲ್ಪಿಗಳು ಇದರ ಬಗ್ಗೆ ಹೆಚ್ಚಿನ ಮಹತ್ವ ಕೊಡದೆ, ಕೆಲಸ ಮಾಡುತ್ತ ಮಾಡುತ್ತ ಅಲ್ಲಿ ಇಲ್ಲಿ ಸ್ವಲ್ಪ ಗುರುತುಗಳನ್ನು ಮಾಡಿಕೊಂಡು ಕಡಿಯುತ್ತಾರೆ. ಇಂತಹ ಕೆಲಸದಲ್ಲಿ ಎಷ್ಟು ಸಿದ್ಧಿಯನ್ನು ಕಾಣಬಹುದು? ವಾದಿರಾಜರು ಇದಕ್ಕೆ ಅಪವಾದವಾಗಿದ್ದರು. ಎಂತಹ ಶಿಲ್ಪ ರಚಿಸಬೇಕಾದರೂ ಪೂರ್ವಸಿದ್ಧತೆ ಬೇಕೇಬೇಕು, ಅದರ ಮೊದಲ ಹಂತವೇ ರೇಖಾಚಿತ್ರ ಎಂದು ದೃಢವಾಗಿ ನಂಬಿದ್ದರು. ಹೀಗೆ ಮನಸ್ಸಿನಲ್ಲಿ ರೂಪಿಸಿಕೊಂಡ ಆಕೃತಿಗೆ ಅನುಸಾರವಾಗಿ ರೇಖಾಚಿತ್ರ ಮಾಡಿಕೊಳ್ಳುತ್ತಿದ್ದರು ಮತ್ತು ರೇಖಾ ಚಿತ್ರವಾದರೆ ಅರ್ಧಶಿಲ್ಪವಾದಂತೆ ಎನ್ನುತ್ತಿದ್ದರು. ಅಂತಹ ರೇಖಾಚಿತ್ರದಿಂದ

ಕಲ್ಲಿನಲ್ಲಿ ರೂಪು ಮೂಡಿಸುತ್ತಿದ್ದರೇ ಹೊರತು, ಮಾಡುತ್ತ ಹೇಗೆ ಬಂದರೂ ಸರಿ ಎನ್ನುವ ಮಾತೇ ಇರಲಿಲ್ಲ. ಕೆಲಸ ಮಾಡುವಾಗ ಸ್ವಲ್ಪ ಹೆಚ್ಚಿಗೆ ಕಲ್ಲು ತೆಗೆದುಬಿಟ್ಟರೆ, ಅರ್ಧ ಮುಕ್ಕಾಲು ಕೆಲಸವಾಗಿದ್ದರೂ, ಕಲ್ಲನ್ನೇ ಬದಲಾಯಿಸು ತ್ತಿದ್ದರೇ ಹೊರತು, ಹೇಗಿದ್ದರೂ ಸರಿ ಎಂದು ಮುಂದುವರಿಯುತ್ತಿರಲಿಲ್ಲ.

ಅವರು ಕೆಲಸಗಳನ್ನು ತೆಗೆದುಕೊಳ್ಳುತ್ತಿದ್ದ ರೀತಿ ಕೂಡ ವಿಶೇಷವೆಂದೇ ಹೇಳಬೇಕು. ಕೆಲಸಗಳನ್ನು ಒಪ್ಪಿಕೊಳ್ಳುವಾಗ ಆದಷ್ಟು ಸಂಪ್ರದಾಯ ಶೈಲಿಗಳಿಗೆ ಸೀಮಿತವಾಗಿರುವಂತೆ ಬಂದವರ ಮನ ಒಲಿಸುತ್ತಿದ್ದರು. ತಮ್ಮ ಮನಸ್ಸಿಗೆ ಆ ಕ್ಷಣದಲ್ಲಿ ಏನು ತೋರುತ್ತದೆಯೋ ಅಷ್ಟೇ ಬೆಲೆ ಕಟ್ಟುತ್ತಿದ್ದುದು. ಆಗ ಮಾತ್ರ ತಾವು ಮಾಡಬೇಕಾದ ಕೆಲಸದ ಮೌಲ್ಯದ ಬಗ್ಗೆ ಮಾತನಾಡುತ್ತಿದ್ದರು. ಕೆಲಸ ಪ್ರಾರಂಭವಾದ ಮೇಲೆ ಅದು ಚಿಕ್ಕದಾಗಲೀ, ದೊಡ್ಡದಾಗಲೀ, ಹಣಬರಲಿ, ಬಾರದಿರಲಿ, ಅದ್ಯಾವುದೂ ಅವರ ಮನಸ್ಸಿನಲ್ಲಿ ಉಳಿಯುತ್ತಿರಲಿಲ್ಲ. ಕೆಲವೊಮ್ಮೆ ಹೇಳಿದ್ದಕ್ಕಿಂತ ಜಾಸ್ತಿ ಖರ್ಚಾಗಿದ್ದರೂ, ಮಾತು ಕೊಟ್ಟಾಯಿತಲ್ಲವೆ? ''ನಮಗೆ ಕೆಲಸ ಕೊಡುವವರು ಕೊಡುವ ಹಣ Scholarship ಇದ್ದಂತೆ'' ಅಧ್ಯಯನ ಮಾಡಲು ಯಾರು ಹಣ ಕೊಡುತ್ತಾರೆ? ಆದ್ದರಿಂದ ಅವರು ಕೊಟ್ಟ ಹಣವನ್ನು ಕಡಿಮೆಯಾಯಿತೆಂದು ಯಾವಾಗಲೂ ಯೋಚಿಸಬಾರದು ಎನ್ನುತ್ತಿದ್ದರು. ಅಧ್ಯಯನವೇ ಗುರಿಯಾಗಿದ್ದರಿಂದ ಕೆಲವು ಸಾರಿ ಕೆಲಸ ಮಾಡಿಕೊಡುವುದು ತಡವಾಗಿ, ಕಾಯಿಸುತ್ತಿದ್ದರು. ಅವರು ಕೆಲಸ ಮುಗಿಸಿದ ಮೇಲೆ ತಾವು ಕಾಯುತ್ತಿದ್ದುದೂ ಸಾರ್ಥಕವಾಯಿತೆಂದು ತೃಪ್ತಿ ಪಟ್ಟುಕೊಳ್ಳುತ್ತಿದ್ದರು.

## ಶಿಲ್ಪ ರಚನೆಯ ವೈಶಿಷ್ಟ್ಯ

ಎಲ್ಲ ಶಿಲ್ಪಗಳೂ ಒಂದೇ ರೀತಿ ಕೆತ್ತುವುದು, ಬೇಡದ ಭಾಗಗಳನ್ನು ತೆಗೆಯುತ್ತ ರೂಪ ಮೂಡಿಸುವುದು, ಎಂದು ಸಾಮಾನ್ಯವಾಗಿ ಎಲ್ಲರದೂ ಕಲ್ಪನೆ. ಆದರೆ ವಾಸ್ತವದಲ್ಲಿ ಹಾಗಲ್ಲ. ಒಬ್ಬೊಬ್ಬ ಶಿಲ್ಪಿಯು ಕಡೆಯುವ ಶೈಲಿ ಒಂದೊಂದು ರೀತಿಯಿರುತ್ತದೆ. ವಾದಿರಾಜರು ಅನುಸರಿಸುತ್ತಿದ್ದ ರೀತಿ ಕೆಲಸ ಮಾಡುವವರಿಗೇ ಒಂದು ಮಾದರಿ ಎನ್ನಬಹುದು. ರೇಖಾಚಿತ್ರವನ್ನು ಕಲ್ಲಿನ

ಮೇಲೆ ಮೂಡಿಸಿ ಬೇಡವಾದ ಭಾಗಗಳನ್ನು ತೆಗೆಯುವುದು ಮೊದಲ ಹಂತ. ಈ ಹಂತವನ್ನು ಸ್ವಲ್ಪ ಕೆಲಸ ಕಲಿತವರು ಕೂಡ ವಾದಿರಾಜರ ಬಳಿ ಕೆಲಸ ಮಾಡುವಾಗ ಸುಲಭವಾಗಿ ಮಾಡಬಹುದಿತ್ತು. ಕಾರಣ ಸುಸ್ಪಷ್ಟವಾದ ಅವರ ರೇಖಾ ಚಿತ್ರ. ಇದನ್ನು ಪರಸ್ಥಳ ತೆಗೆಯುವುದೆನ್ನುತ್ತಾರೆ. ಈ ಕೆಲಸವನ್ನೂ ನಾವು ಶಿಷ್ಯರು, ಇಲ್ಲವೆ ಅವರು ನೇಮಿಸಿಕೊಂಡಿದ್ದವರು ತೆಗೆಯುತ್ತಿದ್ದರು. ಮುಂದಿನ ಹಂತವೇ Modelling ಉಬ್ಬು ತಗ್ಗು ನಿರ್ಮಿಸುವ ಹಂತ. ಇದೇ ಅತ್ಯಂತ ಆಕರ್ಷಕವಾದ ಹಂತವಾಗಿತ್ತು. ಒಟ್ಟು ಕೃತಿಯ ಅಂದ ಕೆಡದಂತೆ ಸೂಕ್ತ ಉಳಿಯಿಂದ ಉಬ್ಬು ತಗ್ಗು ಮೂಡಿಸುತ್ತಿದ್ದರೆ ಉಳಿಯಿಂದ ರೇಖಾಚಿತ್ರ ಬಿಡಿಸಿದಂತಿರುತ್ತಿತ್ತು. ಹೆಜ್ಜೆ ಹೆಜ್ಜೆಗೂ ಅವರ ಹಲವಾರು ವರ್ಷಗಳ ಅನುಭವ, ಸಾಧನೆ, ಮೈಗೂಡಿಸಿಕೊಂಡು ಬಂದ ಕಲಾಭಿರುಚಿಗಳು ಎದ್ದು ಕಾಣುತ್ತಿದ್ದವು. ಹೀಗೆ ಆಕೃತಿ ಮೂಡಿಸುವುದನ್ನು ನೋಡುವುದೇ ಒಂದು ಹಬ್ಬ. ಶಿಷ್ಯರಿಗಂತೂ ಇಂತಹ ಅನುಭವವನ್ನು ತಪ್ಪಿಸಿಕೊಳ್ಳಲು ಮನಸ್ಸೇ ಇರುತ್ತಿರಲಿಲ್ಲ. ಒಂದೊಂದು ಉಳಿಯ ಏಟೂ ಕೂಡ, ಅಷ್ಟೊಂದು ಪ್ರಭಾವಶಾಲಿಯಾಗಿರುತ್ತಿತ್ತು. 'Stroke' ಎಂದು ಹೇಳುತ್ತಾರಲ್ಲ, ಕಲ್ಲಿನಲ್ಲಿ ಆಕೃತಿ ಹಂತಹಂತವಾಗಿ ರೂಪುಗೊಳ್ಳುತ್ತಿದೆ ಯಕ್ಷಿಣಿಯಾಗಿದ್ದಂತೆ ಇರುತ್ತಿತ್ತು. ಮೊದಲಿನಿಂದ ಕೊನೆಯುವರೆಗೂ ಎಲ್ಲೂ ಆಕರ್ಷಣೆಯನ್ನು ಕಳೆದುಕೊಳ್ಳುತ್ತಲೇ ಇರಲಿಲ್ಲ. ಯಾವ ಹಂತದಲ್ಲೇ ನಿಲ್ಲಿಸಿದರೂ ಒಂದು ಉತ್ತಮ ಕಲಾಕೃತಿಯಂತೆ ಕಾಣುತ್ತಿತ್ತು. ಈ ಹಂತದಲ್ಲಿ ಒಂದು ರೀತಿಯ ಮೋಡಿಗೊಳಗಾದವರಂತೆ, ಆವೇಶ ಬಂದವರಂತೆ, ಮೈಮರೆತು ಕೆಲಸ ಮಾಡುತ್ತಿದ್ದರು. ಮುಂದಿನ ಹಂತ ನಯಗೊಳಿಸುವುದು, ಅಲಂಕರಣ ಇತ್ಯಾದಿ. ಈ ರೀತಿಯ ಕೆಲಸ ಸಹಜವಾಗಿ ಆ ಮಟ್ಟದ ಕಲಾವಿದರಿಗೆ ಆಸಕ್ತಿ ಕೆರಳಿಸುತ್ತಿರಲಿಲ್ಲ. ಆಗ ಮಾತ್ರ ಶಿಷ್ಯರಿಗೆ ಇಂತಹ ಕೆಲಸಗಳನ್ನು ಮಾಡಲು ಅವಕಾಶ ಇಲ್ಲಿಂದ ಮುಂದೆ ವಾದಿರಾಜರ ಗಮನ ಶಿಲ್ಪದ ಮುಖಭಾವದ ಕಡೆಗೆ ಕೇಂದ್ರೀಕೃತವಾಗುತ್ತಿತ್ತು. ಈ ರೀತಿ ಶಿಲ್ಪ ರಚಿಸುವ ಎಲ್ಲ ಹಂತಗಳನ್ನೂ ನೋಡಿ ಆನಂದಿಸಿದ ಶಿಷ್ಯರೇ ಇಲ್ಲ ಎನ್ನಬಹುದು. ಅಕಸ್ಮಾತ್ ನಾವು ಕೆಲಸ ಮಾಡುವಾಗ ಅಂತಹ ಒಂದು Stroke ಬಂದರೆ ಎಷ್ಟು ಸಂತೋಷವಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಅವರ ಶಿಷ್ಯರೆಲ್ಲರೂ ಈ ರೀತಿ ಕೆಲಸ ಮಾಡುವುದನ್ನು ಎಷ್ಟು ಚನ್ನಾಗಿ ಅನುಸರಿಸಿದ್ದಾರೆಂದರೆ, ಅರ್ಧ ಕೆಲಸ

ಮಾಡಿಟ್ಟಿದ್ದರೂ ಇದು ವಾದಿರಾಜರ ಪರಂಪರೆಯೆಂದು ಸುಲಭವಾಗಿ ಗುರುತಿಸಬಹುದು. ಅಂತಹ ಅತ್ಯುತ್ತಮ ಮಾರ್ಗವನ್ನು ಕಿರಿಯರಿಗೆ ಹಾಕಿಕೊಟ್ಟಿದ್ದಾರೆ.

ಇದೆಲ್ಲದರ ಜೊತೆಗೆ ಅವರ ಸರಳತೆ, ಹೊಸತನ್ನು ತಿಳಿದುಕೊಳ್ಳಬೇಕೆಂಬ ಉತ್ಸಾಹ ಎಂದೂ ಕುಂದುತ್ತಿರಲಿಲ್ಲ. ತಮಗೆ ತಿಳಿಯದ ವಿಷಯ ಬೇರೆಯವರಿಗೆ ಗೊತ್ತಿದೆಯೆಂದರೆ, ಸುಲಭವಾಗಿ ಅವರಲ್ಲಿ ಹೋಗಿ ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದರು. ಚೀರ್ಣಗಳನ್ನು ಮಾಡುವುದು, ಹೊಸ ಹೊಸ ಮಾಧ್ಯಮಗಳ ಬಳಕೆ, ಬೇರೆ ಬೇರೆ ರೀತಿಯ ಕಲ್ಲುಗಳನ್ನು ಬಳಸಿ ಶಿಲ್ಪ ಮಾಡುವದು ಇವರಿಗೆ ಅತ್ಯಂತ ಆಸಕ್ತಿಯ ಕೆಲಸಗಳು. ತಾಂತ್ರಿಕ ಅನುಕೂಲಗಳಿಲ್ಲದಿದ್ದ ಕಾಲದಲ್ಲೇ ಹಿಂದಿನವರು ತಮಗೆ ಸಿಕ್ಕ ಎಲ್ಲ ರೀತಿಯ ಕಲ್ಲುಗಳನ್ನೂ ಬಳಸಿದ್ದಾರೆ. ಆಧುನಿಕ ಯುಗದಲ್ಲಿರುವ ನಾವು ಏಕೆ ಬರೀ ಬಳಪದ ಕಲ್ಲು ಉಪಯೋಗಿಸಬೇಕು ಎನ್ನುತ್ತಿದ್ದರು. ಅಂದಿದ್ದು ಮಾತ್ರವಲ್ಲ, ಕೆಂಪುಕಲ್ಲು, ಹಸಿರುಕಲ್ಲು (Green Quartz), ಗ್ರಾನೈಟ್ ಕಲ್ಲುಗಳನ್ನೂ ದಕ್ಷಿಣಕ್ಕೆ ಅಪರೂಪವಾದ ಅಮೃತಶಿಲೆಯನ್ನೂ ಬಳಸಿ ವಿಗ್ರಹಗಳನ್ನು ಮಾಡಿದ್ದಾರಲ್ಲದೆ, ಆ ಕಲ್ಲುಗಳಿಗೆ ಸೂಕ್ತವಾದ ಉಳಿಗಳನ್ನೂ ಹುಡುಕಿ, ಅದನ್ನೇ ಒಂದು ಸಂಶೋಧನೆಯನ್ನಾಗಿ ಮಾಡಿದ್ದಾರೆ. ಮರದ ಕೆತ್ತನೆಯಿಂದ ಹಿಡಿದು ಕಲ್ಲು ಕೆತ್ತನೆಯವರೆಗೆ ಇದುವರೆಗೂ ಬಳಸುತ್ತಿದ್ದ ಚೀರ್ಣಗಳಿಗೆ ಬದಲಾಗಿ tempered steelಗಳನ್ನು ತಂದು ಚೀರ್ಣ ಮಾಡಿಕೊಳ್ಳುವುದು, ಉಳಿ ಮಾಡಿದರೆ temper ಕೊಡುವ ಹದ ಎಲ್ಲವನ್ನೂ ಕಲಿಯುತ್ತಿದ್ದರು. ಉಳಿ ಮಾಡುವವರು, temper ಕೊಡುವವರು, Fibreglass ನಲ್ಲಿ helmet ಮಾಡುವವರು, ಎಲ್ಲರೂ ಅವರ ಗುರುಗಳು. ಹೊಸತನ್ನು ತಿಳಿಯುವಾಗ ಅವರ ಚೈತನ್ಯ, ತಾಳ್ಮೆ, ಆಸೆ, ಉತ್ಸಾಹ, ತರುಣರನ್ನು ನಾಚಿಸುವಂತಿತ್ತು.

## ಪ್ರಯೋಗಗಳು

ಇದಷ್ಟು ಶಿಲ್ಪಗಳನ್ನು ಮಾಡುವ ರೀತಿಯಾದರೆ, ಮಾಡಿದ ಕೆಲವು ಸಣ್ಣ ಸಣ್ಣ ಶಿಲ್ಪಗಳನ್ನು ಪ್ರತಿಕೃತಿ ಮಾಡುವಾಗ ಅವರು ನಡೆಸಿದ ಪ್ರಯೋಗಗಳು ಇನ್ನೂ ನೆನಸಿಕೊಳ್ಳುವಂತಹುದು.

ಡಿಸ್ಪೆಕ್ ಸೆಂಟರಿನಲ್ಲಿದ್ದಾಗ ಕಂಚಿನ ವಿಗ್ರಹಗಳಿಗಾಗಿ ಮೇಣದಲ್ಲಿ ಕೃತಿ ರಚಿಸಿ, ಅದರಿಂದ ಎರಕ ಹೊಯ್ಯುತ್ತಾರೆ. ಅಂತಹ ಮೇಣದ ಕೃತಿಯಲ್ಲಿ, ಒಂದರಲ್ಲಿ ಒಂದೇ ಅಚ್ಚು ತೆಗೆಯಬಹುದು. ಪ್ಲಾಸ್ಟರಿನ ಅಚ್ಚು ಮಾಡಿಕೊಂಡು, ಮೇಣಹೊಯ್ದು ನೂರಾರು ಒಂದೇ ರೀತಿಯ ಕೃತಿಗಳನ್ನು ಮಾಡಿಕೊಂಡು ಎರಕ ಹುಯ್ಯಲು ತೋರಿಸಿಕೊಟ್ಟಿದ್ದರು. ಇದು ಡಿಸ್ಪೆಕ್‌ಸೆಂಟರು ಪ್ರಾರಂಭಿಸಿದ ಹಂತದಲ್ಲಿ ಮಾಡಿದ ಸಂಶೋಧನೆ. ಅನಂತರದ ವರ್ಷಗಳಲ್ಲಿ 1977-80ರಲ್ಲಿ ಜೀವನಕ್ಕಾಗಿ ಬೇಡಿಕೆಗಳೇ ಇಲ್ಲದ ಕಾಲವೊಂದಿತ್ತು. ಜೀವನಕ್ಕಂತೂ ಬಹಳ ತೊಂದರೆಯಾಗಿತ್ತು. ಅಂತಹ ಸಮಯದಲ್ಲಿ ಸಣ್ಣ ಸಣ್ಣ ವಿಗ್ರಹಗಳನ್ನು ಅಚ್ಚು ತೆಗೆದುಮಾಡಲು ಅನುಕೂಲವಾಗುವಂತೆ ಮಾಡಿಕೊಂಡು, ಹತ್ತಾರು ಪ್ರತಿಕೃತಿಗಳನ್ನು ಮಾಡಿ ಮಾರಲಾರಂಭಿಸಿದ್ದರು. ಪ್ಲಾಸ್ಟರ್ ಅಚ್ಚಿನಿಂದ ಮಾಡುವುದು ಅಷ್ಟು ಸುಲಭವಾದ ಕೆಲಸವಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಹಚ್ಚು ತೆಗೆಯಲು ರಬ್ಬರ್ ಬಳಸುತ್ತಾರೆಂದು ಕೇಳಿದ್ದರು. ಬಾಂಬೆಯಲ್ಲಿ ದೊರೆಯುವುದೆಂದು, ಅದನ್ನು ಆವೇಳೆಗಾಗಲೇ ಬಳಸಿದ್ದ ಶ್ರೀ ವೆಂಕಟಾಚಲಪತಿಯವರು (ವಿಶ್ವೇಶ್ವರಯ್ಯ ಮ್ಯೂಸಿಯಂನಲ್ಲಿದ್ದ ಕಲಾವಿದರು) ತಿಳಿಸಿದ್ದಲ್ಲದೆ, ಇವರಷ್ಟೇ ಆಸಕ್ತಿ ವಹಿಸಿ ಅದನ್ನು ತಂದು, ಬಳಸುವುದರಲ್ಲಿ ಸಹಾಯ ಮಾಡಿದ್ದರು. ಈ ಸಂಶೋಧನೆಯ ಸಮಯದಿಂದ ವೆಂಕಟಾಚಲಪತಿ, ಆಧುನಿಕ ಶಿಲ್ಪಿಯಾದರೂ ವಾದಿರಾಜರಿಗೆ ಎಷ್ಟು ಆತ್ಮೀಯರಾದರೆಂದರೆ, ನಿತ್ಯವೂ ಆಫೀಸಿನಿಂದ ಮನೆಗೆ ಹೋಗುವಾಗ, ವಾದಿರಾಜರನ್ನು ಕಾಣದೆ ಹೋಗುತ್ತಿರಲಿಲ್ಲ. ಹೊಸ ವಿಷಯಗಳನ್ನು ತಿಳಿದುಕೊಳ್ಳಲು ಮ್ಯೂಸಿಯಂ ಮುಖಾಂತರ ದೊರೆಯುತ್ತಿದ್ದ ಅವಕಾಶಗಳನ್ನು ಬಳಸಿಕೊಂಡು ವಾದಿರಾಜರಲ್ಲಿ ಹಂಚಿಕೊಳ್ಳಲು ಬರುತ್ತಿದ್ದರು. ಒಂದು ದಿನ ಸಂಜೆ ವೆಂಕಟಾಚಲಪತಿ ಬರದಿದ್ದರೆ, ಯಾಕೋ ಚಲಪತಿ ಬರಲೇ ಇಲ್ಲ ಎಂದು ಪೇಚಾಡುತ್ತಿದ್ದರು. ವಾದಿರಾಜರು ತೀರಿಕೊಳ್ಳುವ ಹಿಂದಿನ ದಿನ ಕೂಡ ಚಲಪತಿಯವರು ಬಂದು ಮಾತನಾಡಿ, ಅವರು ಬಯಸಿದ್ದ ಪಪ್ಪಾಯ ಹಣ್ಣನ್ನು ತಂದುಕೊಟ್ಟಿದ್ದರು. ಸಮಾನ ಆಸಕ್ತಿಯುಳ್ಳ ಕಲಾವಿದರು ಸಿಕ್ಕಿದರೆ, ಅವರೊಡನೆ ತಮ್ಮ ಭಾವನೆಗಳನ್ನು, ಅನಿಸಿಕೆಗಳನ್ನು ಇಂತಹ ಪ್ರಯೋಗಗಳ ಬಗ್ಗೆ ಅನುಭವಗಳನ್ನು ಹಂಚಿಕೊಳ್ಳಲು ಸದಾ ಸಿದ್ಧರಾಗಿರುತ್ತಿದ್ದರು.

ಕೊನೆಗೂ ರಬ್ಬರ್ ಸಿಕ್ಕಿತು. ಮನೆಯೇ ಪ್ರಯೋಗ ಶಾಲೆ, ಉತ್ಪಾದನಾ ಕೇಂದ್ರ ಮತ್ತೆ Show room ಕೂಡ ಆಯಿತು. ಗಣೇಶ, ಕೃಷ್ಣ, ಬುದ್ಧ ಮುಂತಾದ ಶಿಲ್ಪಗಳು ಬಹಳ ಜನಪ್ರಿಯವಾಗಿ ಬಿಸಿದೋಸೆಯಂತೆ ಖರ್ಚಾಗುತ್ತಿದ್ದವು. ಪರಿಸ್ಥಿತಿ ಸುಧಾರಿಸಿದ್ದು ವಾದಿರಾಜರಿಗೆ ತೃಪ್ತಿ ತಂದಿತ್ತು. ಕಲಾವಿದ ಯಾವ ಕ್ಷಣದಲ್ಲೂ ಕೆಲಸವಿಲ್ಲ ಎಂದು ಕೂಡಬಾರದು. ಇಂತಹ ಪ್ರಯೋಗಗಳನ್ನು ಹೆಚ್ಚು ಹೆಚ್ಚು ಮಾಡಬೇಕೆನ್ನುತ್ತಿದ್ದರು. ಅಲ್ಲದೆ ಶಿಷ್ಯರಿಗಾಗಲೀ, ಆಸಕ್ತರಿಗಾಗಲೀ ಏನನ್ನು ಮುಚ್ಚಿಡದೆ, ತಮ್ಮ ಪ್ರಯೋಗಗಳನ್ನು ತೋರಿಸಿ, ಅವರಿಗೂ ಮಾಡಲು, ಪ್ರತಿಕೃತಿಗಳನ್ನು ಮಾಡಲು ಪ್ರೋತ್ಸಾಹಿಸುತ್ತಿದ್ದರು. ಫೈಬರ್ ಗ್ಲಾಸ್, ರೆಸಿನ್ ಬಂದಾಗಲಂತೂ ವಾದಿರಾಜರ ಸಮಯವೆಲ್ಲ ಅದರಿಂದ ಕೃತಿಗಳನ್ನು ಮಾಡುವುದರಲ್ಲೇ ಕಳೆಯುತ್ತಿತ್ತೆನ್ನಬಹುದು. ಅದೇ ಸಮಯದಲ್ಲಿ ನಗರದ N.M.K.R.V. ಕಾಲೇಜಿಗೆ ಒಂದು ಶಾರದೆಯ ವಿಗ್ರಹ, ಮಹಾತ್ಮಗಾಂಧಿ ರಸ್ತೆಯ Blue Fox ಹೋಟೆಲಿಗಾಗಿ ಒಂದು ಅಲಂಕೃತ 'ಚಕ್ರ'ವನ್ನು ಮಾಡಿಕೊಟ್ಟರು. ಕಲ್ಲುಪುಡಿ, ಅಮೃತಶಿಲೆಯಪುಡಿ, ಬಣ್ಣಬಣ್ಣದ ಪುಡಿಗಳನ್ನು ಬಳಸಿ, ಶ್ರೀಗಂಧದಂತೆ, ದಂತದಂತೆ, ಕಲ್ಲಿನಂತೆ ತೋರುವ ಪ್ರತಿಕೃತಿಗಳನ್ನು ಮಾಡಿದ್ದರು.

ಈ ಫೈಬರ್‌ಗ್ಲಾಸ್ ಬಳಸಿ ಮಾಡಿದ ವಿಶಿಷ್ಟ ಪ್ರಯೋಗವೆಂದರೆ Cut Glass ರೀತಿ ಕಾಣುವ ಚಿತ್ರಗಳನ್ನು ಮಾಡಿದ್ದು. ಈ ಚಿತ್ರಣಗಳ ಹಿಂದಿನಿಂದ ಬೆಳಕು ಬಿಟ್ಟಾಗ ಗಾಜುಗಳನ್ನು ಜೋಡಿಸಿ ಮಾಡುವ ಚಿತ್ರಣಗಳಂತಿರುತ್ತಿತ್ತು. ಈ ಪ್ರಯೋಗ ನಡೆಸುತ್ತಿದ್ದ ಸಂದರ್ಭದಲ್ಲಿ ಖ್ಯಾತಗಾಯಕ, ಡಾ. ಮಲ್ಲಿಕಾರ್ಜುನ ಮನ್ಸೂರರಿಗೆ ಪ್ರತಿಷ್ಠಿತ ಕಾಳಿದಾಸ ಪ್ರಶಸ್ತಿ ಬಂದಿತ್ತು. ಅವರನ್ನು ಸನ್ಮಾನಿಸಲು ಇಲ್ಲಿಯ ಅವರ ಅಭಿಮಾನಿಗಳು ಒಂದು ದೊಡ್ಡ ಸಮಾರಂಭವನ್ನು ಹಮ್ಮಿಕೊಂಡಿದ್ದರು. ಮಿತ್ರರಾದ ಶ್ರೀ ಇ.ಆರ್. ಸೇತುರಾಂರವರು ಬಂದು, ಒಂದು ನೆನಪಿನ ಕಾಣಿಕೆಗಾಗಿ ಏನಾದರೂ ಮಾಡಿಕೊಡಬೇಕೆಂದಾಗ, ತ್ಯಾಗರಾಜರ ಸುಂದರ ಚಿತ್ರವನ್ನು ಫೈಬರ್ ಗ್ಲಾಸಿನಲ್ಲಿ ರಚಿಸಿಕೊಟ್ಟರು. ಹಿಂದಿನಿಂದ ಬೆಳಕು ಬಿಟ್ಟಾಗ Cut Glass ನಂತೆ ಕಾಣುವ ಪ್ರಯೋಗವನ್ನು ಉಪಯೋಗಿಸಿ, ಯಶಸ್ವಿಯಾಗಿದ್ದರು. ಅದಾದ ಕೆಲವೇ

ತಿಂಗಳಲ್ಲಿ ಮಿತ್ರ ಗಾಯಕ ಶ್ರೀ ಎ. ಸುಬ್ಬರಾವ್ ಅವರ 60ನೇ ಹುಟ್ಟುಹಬ್ಬಕ್ಕೆ ಪುರಂದರ ದಾಸರ ಚಿತ್ರಣವನ್ನು ಇದೇ ರೀತಿ ಮಾಡಿಕೊಟ್ಟಿದ್ದರು. ಹೀಗೆ ಇನ್ನೂ ಹಲವಾರು ಪ್ರಯೋಗಗಳು ಇಲ್ಲಿ ನಡೆದೇ ಇತ್ತು. ಒಂದೊಂತೂ ಅರ್ಧ ಮಾಡಿದ ಪ್ರಯೋಗವಿದೆ. ಅದನ್ನು ಹೇಗೆ ಮುಂದುವರಿಸುವುದೆಂಬು ದಂತೂ, ನನಗಂತೂ ಅರ್ಥವಾಗಿಲ್ಲ, ಅವರ ತಲೆ ಯಾವ ರೀತಿ ಕೆಲಸ ಮಾಡುತ್ತಿತ್ತು. ಎಂದು ಊಹಿಸುವುದಕ್ಕೂ ಆಗುತ್ತಿಲ್ಲ. ಅದರ ನಂತರ ಕಾಯಿಸಿ ಹುಯ್ಯುವ ರಬ್ಬರ್ ಬದಲು, ಕಾಯಿಸದೆ ಬಳಸಬಹುದಾದ ರಬ್ಬರ್ ಪಾಶ್ಚಾತ್ಯ ದೇಶಗಳಲ್ಲಿ ದೊರೆಯುವುದೆಂದು ತಿಳಿದಾಗ ಲಂಡನ್ನಿನ ಸ್ನೇಹಿತ ನೇರ್ಥ ಡೇವಿಡ್‌ಗೆ ಬರೆದು ಅದನ್ನು ತರಿಸಿದ್ದರು.

ಅವರು ಈ ರೀತಿ ಮಾಡಿದ ಪ್ರಯೋಗಗಳನ್ನು ಮಾತ್ರವೇ ಕಲಿತರೂ ಒಂದೊಂದು ಪ್ರಯೋಗದಿಂದಲೂ, ಹೆಚ್ಚು ಕಲ್ಪನಾಶಕ್ತಿಯಿಲ್ಲದವರು ಕೂಡ ಆರಾಮವಾಗಿ ಜೀವನ ನಡೆಸಬಹುದು. ಶಿಲ್ಪಿಗಳಿಗೂ ಸಹ, ಬರೀ ಮರ, ಕಲ್ಲುಗಳನ್ನು ಮಾತ್ರ ಬಳಸುವುದಲ್ಲ, ತಮ್ಮ ಸುತ್ತಮುತ್ತ ದೊರೆಯುವ ಮಾಧ್ಯಮಗಳನ್ನೂ ಬಳಸಬಹುದೆಂದು ವಾದಿರಾಜರು ಮಾದರಿ ಹಾಕಿಕೊಟ್ಟಿದ್ದಾರೆ. ಅವರ ಪ್ರಯೋಗ ಶೀಲತೆ, ಕೆಲಸದಲ್ಲಿನ ತನ್ಮಯತೆ, ಆಸಕ್ತಿ ಬೆಳೆಸಿಕೊಳ್ಳುವುದು ಎಲ್ಲವೂ ಅನುಕರಣೀಯ.

- x - x - x -

## ಶಿಲ್ಪಕಲಾ ಅಕಾಡೆಮಿಯ ಪ್ರಕಟಣೆಗಳು

* ಜಕಣಾಚಾರ್ಯ - ಮೂಲ: ಸಿ.ಕೆ. ನಾಗರಾಜರಾವ್
  ಸಂಗ್ರಹ : ಶ್ರೀಮತಿ ಸರಿತಾಜ್ಞಾನಾನಂದ
  ಬೆಲೆ ರೂ. 40-00

* ಶಿಲ್ಪಿ ಸಂಕುಲ - ಪಿ.ಆರ್. ತಿಪ್ಪೇಸ್ವಾಮಿ
  ಬೆಲೆ ರೂ. 25-00

* ಕಲಾರಾಧನೆ - ಮೂಲ: ಡಾ. ಕೊಂಡೂರು
  ವೀರರಾಘವಾಚಾರ್ಯುಲು
  ಅನುವಾದ : ಶ್ರೀಮತಿ ಸರಿತಾಜ್ಞಾನಾನಂದ
  ಬೆಲೆ ರೂ. 25-00

* ಹೊಯ್ಸಳ ಶಿಲ್ಪಕಲೆ - ಗೌ: ಸಂಪಾದಕ :
  (ಶಿಲ್ಪ ಸಂಪುಟ) ಎನ್. ಮರಿಶಾಮಾಚಾರ್
  ಬೆಲೆ ರೂ. 50-00

* ಶ್ರೀ ಕಾಶ್ಯಪ ಶಿಲ್ಪಶಾಸ್ತ್ರಂ - ಜಿ. ಜ್ಞಾನಾನಂದ
  ಬೆಲೆ ರೂ. 450-00

* ಶಿಲ್ಪಬ್ರಹ್ಮ - ಸಿ. ಪರಮೇಶ್ವರಾಚಾರ್ಯ
  -ಡಾ॥ ಅ.ಲ. ನರಸಿಂಹನ್
  ಬೆಲೆ ರೂ. 15-00

* ಉತ್ತುಂಗ ಕುಶಲಶಿಲ್ಪಿ ದೇವಲಕುಂದ ವಾದಿರಾಜ್
  - ಕನಕಾಮೂರ್ತಿ
  ಬೆಲೆ ರೂ. 15-00

